ಪಟ್ಟದಾಸೆಯ ಮೇಲೆ ಹರುಷದಿಂದೇಱಿಸಲು
ನಿಟ್ಟೈಸಿ [1]ಹಿಂದೆ[1] ತುಂಬುರನನೊಲ್ದೇಱಿಸಲು |
ಗಜಮಸ್ತಕದ ಮೇಲೆ ತಳಿತ ಬೆಳ್ಗೊಡೆಯೊಳಗೆ
ಭಜಿಯಿಸುವ ಪುಣ್ಯಪಾಠಕ[2]ರ ಪರಕೆಗಳೊ[2]ಳಗೆ | [3]+
ಮಿಕ್ಕು ಸೂಳೈಪ ನಿಸ್ಸಾಳಧ್ವನಿಗಳೊಳಗೆ
[4]ತೆಕ್ಕೆಯಿಂ ಪೊಯ್ವ ಪೊಸ ಭೇರೀರವಗಳೊಳಗೆ |[4]
ಬಿ[5][ರು][5]ದೆತ್ತಿ ದೆಸೆದೆಸೆಗೆ ಕರೆವ ಕಹಳೆಗಳೊಳಗೆ
ಸೆರೆದು ಸೆಱೆ [6]ಪೂರೈ[6]ಪ ಶಂಖಧ್ವನಿಗಳೊಳಗೆ |
ಮುಂದೆ ಕನ್ನಡಿವಿಡಿದು ನಡೆವ ಮು[7]ಗ್ಧೆ[7]ಯರೊಳಗೆ
ನಿಂದು ತಳಿರ್ಗಳ[8]ಸ[8]ದಿಂ ಮೆಱೆವ ವನಿತೆಯರೊಳಗೆ |
ಬರುತಿರ್ದನಪ್ರತಿಮ ಸುಕುಮಾರಶೇಖರಂ
ಬರುತಿರ್ದ[9]ನರ್ಥಿಕುಲವಾರಿಜದಿವಾ[9]ಕರಂ |
ಇಂತು ಮಣಮುಂದ ಪುತ್ತೂ[10]ರ್ಗೆ ನಡೆವುತ್ತಮಿರೆ[10]
ಮುಂತೊರ್ವನೆಯ್ತಂದು ಬಿನ್ನಪವೆನುತ್ತಮಿರೆ |
ದೇವ [11]ಲಗ್ನದ ಮುಹೂರ್ತಂ ಬರಂ[11] ಬಸದೊಳಗೆ
[12]ದೇವ ಸುಖದಿಂದಿರ್ಪುದೀ ಪುರ[12] ಬಸದೊಳಗೆ |
ಎನೆ ತಿರುಗಿ ನಡೆದುದಾ ಪಸದತ್ತ ಮುಂ[13]ತಾ[13]ಗಿ
ತನತನಗೆ ಮುಯ್ಯಾನುತಾನಂದಮ[14]ಯ[14]ರಾಗಿ |

---

1 ಪಿಂತೆ (ಖಗ). 2 ಸಂದಣಿಯೊ (ಖ), ರ ಸಂ . . . (ಗ). 3 + ಯೆಡಬಲದೊಳೊತ್ತರಿಪ ಘು × × ಟಾಪಟಲದೊಳು | ಸಡಗರಿಸಿ ಹತ್ತೆಂಟುಸಾವಿರ ತುರಂಗದೊಳು | ಲಕ್ಕಲಿಕ್ಕಂಗಳ ಪದಾತಿಬಲವದಱೊಳಗೆ | (ಚ). 4 ಈ ಪಂಕ್ತಿ (ಖಚ) ಗಳಲ್ಲಿಲ್ಲ ; ಯಿಕ್ಕೆಲದೊಳೊಪ್ಪುತಿಹ ನಾಗಸರರವದೊಳಗೆ (ಗ). 5 ರಿ (ಕಗಚಜ), ಗಿ (ಖ). 6 ಸೂಳೈ (ಖ). 7 ಗುಧೆ (ಖ), ಗುದೆ (ಗಚ). 8 ಶ (ಖ). 9 ನರಸು<ರೆ>ಕುಲ - - - (ಕಜ), ನಾರ್ಥಿ<ರ್ತಿ> ಜನವಾರುಧಿಸುಧಾ (ಖಗ), ನರ್ಥಿಜನವಾರಿಜದಿವಾ (ಚ). 10 ರ್ಗೆದೆ ನಡವುತ್ತಿ (ಖ), ರ್ಗೆಯಿದೆ ನಡೆಯುತಿ (ಗ), ರ್ಗೆದಿನಡವುತ್ತಿ (ಚ). 11 ಸುಮುಹೂರ್ತಂ ಬರಿಪ್ಪುದೀ (ಚ). 12 ನೀವಿಹುದು ಸಕಲಸುಖ ನೆಲಸಿರ್ಪ (ಖ). 13 ದಾ (ಚ). 14 ನ (ಚ).

ಒಂದು ಬನಮಂ [1]ಪೊಕ್ಕು ಮಿಕ್ಕು ಸಂತೋಷದಿಂ[1]
ಮುಂದೆ ಸಿಂಹಾಸನವನಿಕ್ಕಲು ವಿಲಾಸದಿಂ-|
ದೆಸೆಯೆ ಕುಳ್ಳಿರ್ದನಾ ಸುಕುಮಾರ ಸೌಂದರಂ
ವಸುಧೆಗೊಪ್ಪುವ ಮರ್ತ್ಯಮಂಡ[2]ಲ[2]ಪುರಂದರಂ |
ಕೆಲಬಲದೊಳಲ್ಲಲ್ಲಿ ತೆಱಪಱಿದು ಕುಳ್ಳಿರಲು
ನಲಿನಲಿದು [3]ತುಂಬುರಂ[3] ಬಲವಂಕದೊಳಗಿರಲು |
ಮಿತ್ರಸಂಕುಳವೆಲ್ಲ ಪರಿವೇಷ್ಟಿಸುತ್ತಿರಲು
ಚೈತ್ರನಿದಿರ್ವಂದು ಪೊಸಕಾಣ್ಕೆ[4]ಯಿಕ್ಕು[4]ತ್ತಿರಲು |
ಮುಗಿದಿರ್ದ ನೈದಿಲಂಗೊಳಂಗಳಂ ನೋಡುತುಂ
ಮಿಗೆ ಒಳ[5]ಲುವಾ[5] ಚಕೋರಂಗಳಂ ಕಾಣುತುಂ |
ಕೂಡಹಡೆಯದೆ ತೊಳಲ್ವ ನವಿಲ ತಂಡಂಗಳಂ
ಕೂಡೆ ಅಂಕುರವನೆಳಸುವ ಪಿಕಾವಳಿಗಳಂ |
ರಸಫಳಂಗಳನಱಸುತಿರ್ಪ ಶುಕನಿಕರಮುಂ
ಪೊಸಪೂವನೆಳ[6]ಸಿರ್ಪ[6] ಮಧುಕರಪ್ರಕರಮುಂ |
ನೋಡುತುಂ ಕೊಂಡಾಡುತಿರ್ದನಾ ವನದೊಳಗೆ
ಆಡಿಸುತೆ ಪಾಡಿಸುತಮಿರ್ದನಾ ವನದೊಳಗೆ |
ಕುಕ್ಕುಟಾವಳಿಯನನುರಾಗದಿಂ ಕಾದಿಸುತೆ
ಸೊಕ್ಕಿದಾನೆಗಳನಲ್ಲಲ್ಲಿ ಕೈಯಿಕ್ಕಿಸುತೆ |
ಇಂತು ಮುದದಿಂ ನಲಿವುತರಸುಮಗನೊಪ್ಪಿದಂ
ಸಂತತಂ ವನದೊಳಗೆ ಸುಕುಮಾರನೊಪ್ಪಿದಂ ||

## ಪಂಚಮ ಸ್ಥಲಂ

---

[1] ಕಂಡು ಪೊಕ್ಕು ಸಂತೋಷದಿಂ (ಖ), ಪೊಕ್ಕು ಸಂತೋಷದಿಂದಂದು (ಚ). [2] ನ (ಕಖಗಚ).
[3] ಸೌಂದರಂ (ಗ). [4] ಯುಮನಿ (ಚ). [5] ಲ್ದಾ (ಖಗ). [6] ಸುತಿಹ (ಕಜ).

# ೬ನೆಯ ಸ್ಥಲ

ಇಂದುಕಳೆ ಮೆಱೆವ ತಾರಾ-
ವೃಂದದ ನಡುವೊಪ್ಪುವಂತೆ ಪರಿವಾರಕುಳಾ- |
ನಂ[1]ದಂ[1] ಧೀರಕುಮಾರಂ
ಸೌಂದರ[2]ಪೆರುಮಾಳೆಯೊಪ್ಪಿದಂ ತದ್ವನ[2]ದೊಳ್ ||

ಇಂತು ವಿವಾಹತತ್ಪರನಾಗಿ ಸಂಬಿಯಣ್ಣಂ ವಸ[3]ದೊಳಗಿರಲಿತ್ತಲು[3] [4]+ಕೈಲಾಸಪುರದರಮನೆ[5]ಯಲ್[5]ಪರಿಮಿತಪರಿ[6]ವಾರ[6]ನಾಗಿ ವಿರೂಪಾಕ್ಷನಿರ್ದು ಗಿರಿಜೆಗಿಂತೆಂದಂ ದೇವಿ ಕೇ[7]ಳಾ[7] ನಮ್ಮ ಪುತ್ರಂ ಪುಷ್ಪದತ್ತಂ ನರಲೋಕದೊಳ್ ಪುಟ್ಟಿ ಸಂಬಿಯೆಂಬ ನಾಮ[8]ವಾಗಿ[8] ಸಂಸಾರದಿಂ ಕೆಟ್ಟುಪೋಗಲಸುವಾಗಿರ್ದಪಂ ಆತಂಗೆ ಮುನ್ನಿತ್ತ ನಂಬುಗೆಯ ಬೆಂಬಳಿಗೊಂಡು ಪೋಗಿ ಮರ್ತ್ಯದೊಳ್ ತೊತ್ತುಗೊಂಡು- ಆವು ಕಳುಪಿದ [9]ನಿಮ್ಮಿರ್ಬರು[9] ರುದ್ರಕನ್ನಿಕೆಯ[10]ರು[10] ಚೋಳದೇಶದ ತಿರು[11]ವಾರೂ[11]ರೊಳಂ [12]ತಿರುವತ್ತಿಯೂರೊಳಂ[12] [13]ಪರವೆ ಸಂಕಿಲೆಗಳೆಂಬ[13] ನಾಮದಿಂ ಜನಿಯಿಸಿರ್ದಪರವಂದಿರನಾತನೊಳ್ ನೆರಪಿ ಸಕಲಸುಖಮುಂ ಪೂಜೆಯಾಗಿ ಕೈಕೊಂಡು [14]ಕೊಂಡು[14] ಬರ್ಪನೆನಲ್- ಆ[15]ನುಂ[15] [16]ನಿಮ್ಮೊ[16]ಡನೆ ನೋಡುತ್ತುಂ [17]ಬಂದಪೆ[17]ನೆಂದು ದೇವಿಯರ್ ಬಿನ್ನೈಸೆ ನೀನತ್ಯಂತಕರುಣಿ ನಾಂ ಮಾಳ್ಪುದ[18]ತ್ತಿ[18]ನಿಷ್ಠುರ

---

[1] ದದೆ (ಖಗ), ದದಿ (ಜ). [2] ತಾನೊಪ್ಪುತಿರ್ದನಂತಾ ಬನ (ಚ). [3] ದೊಳು ವಿನೋದದಿಂದಿರಲಿತ್ತಲು (ಖ), ದೊಳ್<ಳಗೆ>ವಿನೋದದಿಂದಿರುತ್ತಿರಲ್<ಲು>(ಗಚ), ದೊಳಗಿರಲಿತ್ತಲತ್ತಲು (ಜ). [4] + ಶ್ರೀ (ಚ). [5] ಯ ಅ (ಕಗ), ಯ (ಚ), ಯೊಳ (ಜ). [6] ವೃತ (ಕ). [7] ಳು (ಖಗಚ), ಳ್ (ಜ). [8] ಮಂ ತಾಳ್ದು (ಕ). [9] ನಿನ್ನ (ಚ), ನಂಮಿರ್ವರು (ಜ). [10] ರಂ (ಖ), ರುಂ (ಗ), ರಿಬ್ಬರಂ (ಚ). [11] ನಾವಲೂ (ಕಖ), ವಾಲೂ (ಚ). [12] (ಚ) ದಲ್ಲಿಲ್ಲ ; ತಿರತ್ತಿಯೂರೊಳಂ (ಜ). [13] ಪರವೆ ಶಂಕಿಲೆಯರೆಂಬ (ಕ), ಪರವೇ ಶಂಕಿಲಿ<ಳಿ>ಗಳೆಂಬ (ಖಗ), ಪರವೆನಾಚಿ ಸಂಕಿನಿನಾಚಿಯೆಂಬ (ಚ). [14] (ಗ) ದಲ್ಲಿಲ್ಲ. [15] ನು (ಖಗ). [16] ನಿನ್ನೊ (ಖ), ಬಪ್ಪೆನೊ (ಚ). [17] ಬರ್ಪೆ (ಖಗ). [18] ತ್ಯಂತ (ಖಗಚ).

ಚರಿತ್ರಂ- ಆದೊಡಂ ನೀಂ ಬಂದು- ಆ[1]ನಾವೂರೊಳಿರ್ದನೆಸಲಲ್ಲಿಯ[1] ದೇವಾಲಯದೊ[2]ಳಿರುತೆ[2] ಬರ್ಪುದೆಂದು ಕರುಣಿಸಿ [3]ವಿಚಿತ್ರಂ ಮತ್ತಂ[3] ದೇವಿಯರ್ ನೋಡನೋಡಲೊರ್ವ ಶತವೃದ್ಧನಾಗಿ ನಿಂದಿರ್ದ[4]ನೆಂ[4]ತೆಂದೊಡೆ-

ಆಪಾದ ಮಸ್ತ[5]ಕಂಬರ[5]ವುದ್ಧೂಳಿಸಿದ [6]ವಿಭೂತಿಯ[6] [7]* ತಲೆಯುಂ ಮಯ್ಯುಂ [8]+ ನರೆತೆರೆಗಳಾಗೆ ಜೆಡೆ[9]ಯ[9] ಚಂದ್ರಕಳೆ ಕೊಡೆಯಾಗೆ ಪಿಡಿದ ತ್ರಿಶೂಲಂ ಕೊಡೆಯ ಕಾವಾಗೆ ಖಟ್ವಾಂಗಂ ಯಷ್ಟಿಯಾಗೆ*[7] [10]ಆ[10]ಭರಣದೊ[11]ಳೊ[11]ಂದು ಸರ್ಪಂ [12]ಪ್ರಮಾಣಪತ್ರ[12]ಮಾಗೆ ಕಮಲಜಶಿರಂ ಕಮಂಡಲವಾಗೆ ಪುಲಿ[13]ದೊವಲ್ ಗಜಚರ್ಮಂ ಉಟ್ಟ ಹೊದೆದ ವೇಷ್ಟಿ[13]ಗಳಾಗೆ ಮೆಟ್ಟಿದ [14]ಮೊಲೆನಾಗಂ[14] ಪಾದರಕ್ಷೆ[15]ಗಳಾ[15]ಗೆ ಕಟ್ಟಿದ ಶಿರೋಮಾಲೆ ಜಪಮಾಲೆ[16]ಯಾ[16]ಗೆ [17]+ ಮಹಾವೃದ್ಧನಾಗಿ ಕೈಲಾಸದಿಂ [18]+ [19]ಚೋಳದೇಶದ[19] ಮಣಮಂದಪುತ್ತೂ[20]ರ[20] ಮದುವೆಯ ಚಪ್ಪರ[21]ದ ಮುಂದಿಳಿಹಿ[21]ದಂತಿ[22]ರ್ದಂ[22] ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ವ ಪುರ್ವಿಂ [23]ನೇ[23]ಲ್ವ ತೋಳ ತೊವಲಿಂ ಇಟ್ಟ ವಿಭೂತಿಯಿಂ ಊಱುದ ಯಷ್ಟಿ[24]ಯ[24] ಕೋಲಿಂ ಪಿಡಿದ

---

[1] ತಿರುನಾವವೂರೊ - - - (ಕ), ನಾನಾ ಊರೊಳಿರ್ದನಲ್ಲಲ್ಲಿಯ (ಖ), ವೂರೊ - - - (ಗ), ವೂರೊಳಗಣ ಅಲ್ಲಲ್ಲಿ (ಚ). [2] ಳ್ಪಿಂತ್ತು (ಗ). [3] ಚಿತ್ರವಾಗಿ (ಖ), ಕ್ಷಿಪ್ರವಾಗಿ (ಗ), ವಿಚಿತ್ರಮಾಗಿ (ಚ), ವಿಕ್ರಿತ್ರಂ ಮತ್ತಂ(ಜ). [4] ನದೆಂ(ಗಚ). [5] ಪರಿಯ<ರ್ಯ>ಂತರ (ಖಗ). [6] (ಕ) ದಲ್ಲಿಲ್ಲ; ವಿಭೂತಿಯಂ<ಯುಂ>(ಖಚ). [7]* ಈ ಭಾಗ (ಕಜ)ಗಳಲ್ಲಿಲ್ಲ. [8] + ತುಂಬಿದ (ಚ). [9] ಯುಂ (ಗ). [10] ಭಸ್ಮಾ (ಕ). [11] (ಗ) ದಲ್ಲಿಲ್ಲ. [12] ಯಜ್ಞೋಪವೀತ (ಖಗಚ). [13] ದೊವಲುಟ್ಟಹೊದದ ವಸ್ತ್ರಂ (ಖ), ದೊಗಲುಂವುಟ್ಟು . . . (ಗ), ದೊಗಲುಂ ಗಜಚರ್ಮಮುಂ ಉಟ್ಟುಹೊದದ ವೇಷ್ಟಿ (ಚ). [14] ನಾಗಾಸುರಂ (ಚ), ವೊಲನಾಗಂ (ಜ); [ಮಾ]ಲೆನಾಗಂ? [15] ಯಾ (ಖಗಚ). [16] ಗಳಾ (ಕ). [17] + ಕಯ್ಯಲಿರ್ದ ಪಾಶಂ ನಂಬಿಯಂ ತೋಳ್ತಾಗಿಯಾಳ್ವೆನೆಂಬುದಕ್ಕೆ ಪ್ರಮಾಣಪತ್ರಮಾಗೆ (ಖ), . . . ಪಾಶದಿಂ ನಂಬಿಯಂ ತೊಳಾಗಿಯಾಳ್ಪೆನೆಂಬಂತೆ ಪ್ರಮಾಣ . . . (ಗ), . . . ಪಾಶಮುಂ ನಂಬಿಯಂಣನಂ ತನ್ನ ತೊತ್ತಾಗಿ ಕಟ್ಟಿಯಾಳ್ವೆನೆಂಬಂತೆ ಪ್ರಮಾಣ . . . (ಚ). [18] + ಪೊಱಮಟ್ಟು (ಖ), ಪೊರಮಟ್ಟು ಮರ್ತ್ಯಕ್ಕೈದಿ (ಗ). [19] (ಖಗ) ಗಳಲ್ಲಿಲ್ಲ. [20] ಗರ್ಬಂದು ನಂಬಿಯಣ್ಣನ (ಖಗ). [21] ದುಳಿಹಿ (ಕ), ದ ಮುಂದಿಳುಪಿ<ಹಿ> (ಖಚ), ದ ಮುಂದಿಳಿ (ಗ), ದ ಮುದಿಳಿಹಿ (ಜ). [22] ರ್ಪುದು (ಗ), ರ್ದ (ಚ). [23] ನೆಳ (ಕಗ), ಎಳ (ಚ). [24] (ಖಗಚಜ) ಗಳಲ್ಲಿಲ್ಲ.

ಕಮಂಡಲದಿಂ[1]ದಿ[1]ಳಿದ ಬೆಳುಗಡ್ಡದಿಂ ನಡುಗುವ ನರೆದಲೆಯಿಂ [2]ನರೆತು[2] ನಡಿಲ್ವ ಸರ್ವಾಂಗದಿಂ ಪುಣ್ಯಂ ಪಣ್ಣಾದಂತೆ ಒಮ್ಮೊಮ್ಮೆ ಕೆಮ್ಮುತ್ತೊಮ್ಮೊಮ್ಮೆ [3]ಗೊಹೆ[3]ಗೊಹೆಗುಟ್ಟುತುಂ ಶಿಥಿಲಾಕ್ಷ[4]ರಂಗಳಿಂ[4] ನಮಃಶಿವಾ[5]ಯ ನಮಃ ಶಿವಾಯ[5] [6]ಯೆನುತ್ತೆನ[6]ಲಾಱ[7]ದಂತೆ[7] ನಡುಗುತ್ತುಂ ಪೋಱಗೆ ನೆರೆದ ನೆರವಿ [8]ಗಳೆಲ್ಲಂ ನೋಡುತ್ತಿರಲು[8] ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ [9]ಬಂದೊಡವರ್[9] ಪೊಗಲೀಯ[10]ದಿರ್ದೊಡೆ-[10] ಅವಂದಿರಱಿಯದಂತೆ ಪೊಗು[11]ತ್ರ[11]ಪ್ಪಾಗಳು

ದಂಡೆಗಳಂ ಮುಡಿದುಕೊಂಡಂಜನವನೆಚ್ಚಿಕೊಂಡಾಭರಣಮಂ ತೊಟ್ಟು ಕೊಂಡು [12]ದಿವ್ಯವಸ್ತ್ರಮನುಟ್ಟುಕೊಂಡು[12] ಸಂತಸ[13]ದಿಂ ಸಂದಣಿಗೊಳ್ವ[13] ಸುವಾಸಿನಿಯರಿಂ ಮಂಟಪದ ನಡುವಣ ವೇದಿಕೆಯ ಹೋಮದ ಪರಿ ಸ್ತರಣದ ಸುತ್ತಂ ಕುಳ್ಳಿರ್ದ ವಿಪ್ರಸಂಕುಳದಿಂ [14]ಒಂದು[14] ನೆರೆದ ಬಂಧುಗಳಿಂ ಮುಂದಿರ್ದ ಮಾನ್ಯವರ್ಗದಿಂ ಅತ್ತಲಿತ್ತಲೆಡೆಯಾಡುವ ಸಂಭ್ರಮಕಾಱರಿಂ [15]ಬಾ[16]ಜಿಸಲಿರ್ದ ಬದ್ದವಣರಿಂ[16] ಫಳಿಗೆವಟ್ಟಲಂ ಪರಿವೇಷ್ಟಿಸಿ[17]+ರ್ದ ನಕ್ಷತ್ರ ಪಾಠಕರಿಂ[15] ಕಿಕ್ಕಿಱಿಗಿಱಿದ ವಿವಾಹಮಂಟಪಮಂ ಪೊಗುತಿ[18]ರ್ಪ[18] ತಮ್ಮ ನಾ[19]ರುವ[19]ಱಿಯದೆ ಕಾಣದೆ ಲೆಕ್ಕಿಸ[20]ದೆ[20] ಸಂಭ್ರಮದೊಳಿರೆ ಮೆಲ್ಲಮೆಲ್ಲ ನೆಲ್ಲವ ನೋಡುತಂ ಮನದೊಳ್ ನಗುತಂ [21]ಕೋಲನೂಱುತ್ತೆ[21] [22]ಕೆಮ್ಮಿ ಕುಮ್ಮುತ್ತೆ[22] ಸಾಲ್ಗೊಂಡಿರ್ದ ತುಪ್ಪದ ಕೊಡಂಗ[23]ಳೊಳ್ ನಾಲ್ಕೆ[23]ರಡನೆಡಹಿ [24]+ನಮಃ ಶಿವಾಯಯೆಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳ ಮೇಲೊ[25]ಡೆಬಿಳ್ದು[25]

---

[1] ಯಿ (ಖಚ). [2] (ಖ) ದಲ್ಲಿಲ್ಲ. [3] (ಖಗ) ಗಳಲ್ಲಿಲ್ಲ [4] ರದಿಂ (ಖಗ). [5] (ಗ) ದಲ್ಲಿಲ್ಲ. [6] ಎನ (ಖ), ಯನ (ಗ), ಯೆನುತ್ತೇಳ (ಚ). [7] ದೆ (ಚ). [8] ಯೋಳ್ (ಖ). [9] ಬಂದು ಪೋ<ಪೊ>ಗಲವರ್ (ಖಗ). [10] ದೊಡೆ (ಖಗಚ). [11] ತಿ (ಖಗಜ), ತ್ತಿ (ಚ). [12] (ಖ) ದಲ್ಲಿಲ್ಲ. [13] ಂಗೊಳುವ (ಚ). [14] (ಗ) ದಲ್ಲಿಲ್ಲ. [15] (ಗ) ದಲ್ಲಿಲ್ಲ. [16] ರಿಸ ಲಿರ್ದ - - - (ಕ), ಜಿಸುತ್ತಿಪ್ಪ ಮದ್ದಳಿಗರಿಂ (ಖ), ರಿಸುತಿರ್ದ ಬದ್ದವಣದಿಂ (ಚ), ರಿಸಲಿರ್ದವಸಿಗರಿಂ (ಜ). [17] + ಕೊಂಡಿ (ಕ). [18] ಪ್ಪಾಗಳೂ (ಚ), ರ್ಪಾಗಳು (ಜ). [19] ರೂ ಅ (ಕಖಚ), ರು ಅ (ಗ). [20] ದಂತೆ (ಕಖಗ). [21] (ಖಗ) ಗಳಲ್ಲಿಲ್ಲ. [22] ಕೆಮ್ಮುತ್ತಂ (ಖ), ಕೆಮ್ಮುತುಂ (ಗ), ಕೆಮ್ಮುತಂ (ಚ). [23] ಳೊಳೊಂದೆ (ಖಗ). [24] + ನಮಃ ಶಿವಾಯ (ಚಜ). [25] ಡಬಿರ್ದು (ಕಖ), ಡಂಬೀಳ್ದು (ಗ), ಡೆ × ದ್ದು (ಚ).

ಕುಳ್ಳಿರ್ದರ ಮುಖದೊಳಂ ಕಣ್ಗೊಳಂ [1]ಮಯ್ಯೊಳಂ[1] ತುಪ್ಪಂ ಚೆಲ್ಲೆ ಎಲ್ಲರೆರ್ದು ಮಲ್ಲ[2]ಳಿ[2]ಗೊಂಡು ಘೊಳ್ಳೆಂದು ಬಿ[3]ೞ್ದ[3] ವೃದ್ಧಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ [4]+ ಮೆಲ್ಲನೆ ನೆಗಪಿ ಸಿಂದಿರಿಸಲ್- ಒಂದೆರಡಡಿ[5]ಯಿ[5]ಟ್ಟು ದಡದಡಿಸಿ ನೋಡುವ ಜನವೆಲ್ಲಂ ಎಲೆಲೆ ವೃ[6]ದ್ಧನಾ[6]ಬಿದ್ದಸಂಬಲ್ಲಿಂ ಮುನ್ನಂ [7]ನಿಲಲಾಱದೆ[7] ಹಳಿಲನೆ ಘಳಿಗೆವಟ್ಟ[8]ಲ ಮೇಲೆ ಬೀಳೆ ಕಳಸಿಗೆಯೊಡೆದು ಘಳಿಗೆವಟ್ಟ[8]ಲು ಮುಱಿದು ತಂಡುಲಂ ಚೆಲ್ಲಿ ಜೋಯಿಸರೆಲ್ಲಂ ಕೆದಱಿಪೋಗೆ ಬಿ[9]ದ್ದೇ[9]ಳಲಾಱದೆ ಹಮ್ಮೈಸಿದಂತಿರ ಪರಿತಂದು ಕಣ್ಗೊಳಂ [10]ಬಾಯೊಳಂ[10] ನೀರಂ ತಳಿದೆಂತಕ್ಕೆಚ್ಚಱಿಸೆ ಎತ್ತುವರ ಕಯ್ಯ ಬಾಯೊಳೆ ಜೀವಂ [11]+ [12]ಹಿಡಿಯಬಾರದು ಮುಟ್ಟಬಾರದು[12] [13]ನೋಡಬಾರದು[13] ಸುಡಿಸಲರಿದು [14]ಪಿಡಿದು[14] ಬಿಟ್ಟಡೆ ತುಪ್ಪದ ಕೊಡ[15]ಸ[15] ಮೇಲಲ್ಲದೆ ಬೀಳಂ- ಈ ವೃದ್ಧಬ್ರಾಹ್ಮಣನನೀ ಮುಪ್ಪಿನ ಮರುಳನನೀ ಗೌತಮ[16]ನ ಗೋವ[16]ನೀ [17]+ ಬ್ರಹ್ಮೇತಿಕಾಱನನಾರ್ ಪೊಗಿಸಿದರಾರ್ [18]+ ತಂದ[19]ರ್- ಇದೆ ಅ[19]ವಶಕುನವಿನ್ನೇನೀ ಮದುವೆ ಹಸನಾಗದೆನುತ್ತೆಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದೆತ್ತಿಕೊಂಡು ಹೋಗಿ ತಮ್ಮಾಯುಷ್ಯ[20]ಭಾಷೆ[20]ಗಳಂ ಪೊಱಗಿ[21]ಡು[21]ವಂತೆ ಚಪ್ಪರದ ಪೊಱಗೆ ಮೆಲ್ಲನಿಳುಪಿ ಈ [22]ವಿಪ್ರ[22]ನಂ [23]ಪೊ[23]ಗಲೀಯದಿ[24]ರೀ[24] [25]ವೃದ್ಧನಂ[25] ಪೊಗಿಸದಿರೆಂದು ಬಾಗಿಲ[26]ವನನದುಹುತ್ತೆ[26] ಕದವನಿಕ್ಕಿ ಒಳ[27]ಗಂ[27] ಪೊಗುವೈ

---

[1] (ಚ) ದಲ್ಲಿಲ್ಲ. [2] ಣೆ (ಕ). [3] ದ್ದ (ಕಖಗ), ದ್ದಿರ್ದ (ಚ). [4] + ಮೆಲ್ಲ (ಕ), ಮೆಲ (ಚ). [5] ಯನಿ (ಕಚ) [6] ಧ (ಕ), ಧ ಬಿದ್ದ (ಖಗ), ಧಂ ಬಿದ್ದ (ಚ). [7] (ಖಗ) ಗಳಲ್ಲಿಲ್ಲ. [8] (ಖ) ದಲ್ಲಿಲ್ಲ. [9] ಳ್ದೀ (ಗ). [10] (ಚ) ದಲ್ಲಿಲ್ಲ. [11] + ಪೋಪಂತಿರೆ (ಖಗ). [12] ಹಿಡಿವಡೆ ಮುಟ್ಟಿದವರ ಭಾರಂ (ಕಜ). [13] ಮುಟ್ಟಿದೊಡೆ ಸತ್ತಪಂ (ಚ). [14] ಹಿಡಿದಡೆ ಕಯ್ಯೋಳೆ (ಗ), ಹಿಡಿದಡೆ ಕಯ್ಯೊಳಗೆ (ಚ). [15] ದ (ಗಚಜ). [16] ಗೋವನ (ಜ). [17] + ಕೊಂದನ (ಗ). [18] + ಪೊಗಿಸಿದರಾರ್ (ಕ). [19] ರಿದೇನ (ಕ). [20] ಕಲುಷೆ (ಖ), ಬಾಷೆ (ಗ). [21] ಲಿಸು (ಖ), ರಿಸು (ಗಚ). [22] ವೃದ್ಧ (ಖಗ). [23] ಪು (ಕಜ). [24] ರಿಯಿಾ (ಕಚಜ), ರಿ (ಖಗ). [25] (ಖಗ) ಗಳಲ್ಲಿಲ್ಲ. [26] ವಂಗರುಹುತ್ತೆ (ಕ), ವನಂ ಜಱಿದು ಝುಂಕಿಸಿ (ಖ), ವರಂ ಜರದು ಜಂಕಿಸಿ (ಗ), ವನಂ ಝುಂಕಿಸುತ (ಚ). [27] ಯಿಕೆ ತಾವು (ಖಗ), ಗಂ ಬಂದು (ಚ), ಗೆ (ಜ).

ಸಕ್ಕೆ ಅವರಿಂ ಮುನ್ನವೆಯ್ತಂದೊಳಗಂ ಪೊಕ್ಕು ತೋರಣದ ತಳಿರಂ [1]ಪಱಿ[1]ದು [2]+ಶಿವದಿಡುತ್ತಿರ[3]ಲ್- ಆವರ್[3] ಕಂಡು ಬೆಱಗಾಗಿ ಈಗಳಿಂತು ಪೊಱಗಿರಿಸ [4]ಲಾಗಳಂತೆ[4] ಬಂದು ಮುಂದಿರ್ದಪನೀ ವೃದ್ಧಂ ಕಿಱುಕುಳನಲ್ಲ ಕಾರಣಿಕನಾಗಲೆ ವೇಳ್ಕುಮೆಂದು ನೋಡುತ್ತಿರೆ

[5]ಯಪ್ಪಿಯ ಕೋಲಿಂ[5] [6]ಭಿಂ[6]ಗಾರಿಗಳನಿಱಿದೊಡೆವ್ರುತ್ತುಂ ಜಗಲಿಯಂ ದರಿಗೆಡಹುತುಂ ಮಂಗಳವೆಲ್ಲವನಮಂಗಳವಂ ಮಾಡುತ್ತಿರಲ್- ಅಲ್ಲಿಯ [7]ಪಿರಿಯರುಂ ಮಾನ್ಯರುಂ[7] [8]ಕಂಡೆಲೆ ಅಪ್ಪರ[8] ಇತ್ತ ಬಿಜಯಂಗೆ[9]ಯ್ಯುವದೆನೆ[9] ಕೇಳದಂತೆ ಮತ್ತೆ ಮತ್ತೆ ಶಿವದಿಡುತ್ತೆ- ಎನ್ನ ತೊತ್ತಿನ ಮಗನಂ ಕುಮಾರನೆಂದು ಸತ್ಕುಲಜನೆಂದು ಒಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲಮಂ ಕೆಡಿಸಿಕೊಳ್ಳದಿರಿ [10]ನಾಸಪ್ಪಡೆ[10] ಮದುವೆಯನಾಗಲೀಯೆಂ ನೀವಿದಱಾದ್ಯಂತ[11]ವನೇ[11]ನೆಂದಱಿಯಿರಿ [12]ಅವಂ[12] ನರಸಿಂಗಮೊನೆ[13]ಯರ್ ಪೆತ್ತ[13] ಮಗನಲ್ಲಂ ಕೊಂಡು ಸಾಕಿದ ದತ್ತಪುತ್ರನವಂ ಶಿವಬ್ರಾಹ್ಮಣಂ ಸೌಂದರಪೆರುಮಾಳೆಯಲ್ಲಂ [14]+ನಂಬಿ[15]ಯೆಂದು[15] ಎನ್ನ ತೊತ್ತಿನ ಮಗಂ ಅದಕ್ಕೆ [16]ಪ್ರಮಾಣ[16]ಪತ್ರಮುಂ[17]ಟೆಂದಾ[17]ನುರಂ [18]ಮಸಗಲಾ[18] ತಾಯ್ತಂದೆಗಳ್ [19]ಕಂಡು[19] ಕೌತುಕಂಬಟ್ಟು ಎಮಗೀ ಮದುವೆಯಂತಿರ್ಕೆ ಮುನ್ನವೀ [20]ಬ್ರಾಹ್ಮಣನ[20] ಬ್ರಹ್ಮಹತ್ಯಾದೋಷಂ ತಪ್ಪಿ [21]ತಿದೆ ಸಾಲ್ಗುಂ-[21] ಎಲೆ ಅಯ್ಯಾ ಚಿತ್ತೈಸೆಮ್ಮ ಮಾತಂ [22]+ [23]ನೀಂತಡೊ[23]ಳಗಾಗಿ ಮಹಾಪ್ರತಿಷ್ಠೆಗಳಂ [24]+ ಮಾಣ್ದು ಕಳೆವರ[25]+ಲ್ಲದೆ [26]+ ಪ್ರತ್ಯಕ್ಷ

---

[1] ಹಿಡಿ (ಖಗ). [2]+ ಪಿ × ದು ಶಿವದೋಯೆಂದು (ಚ). [3] ಲದಂ (ಖ). [4] ಲೊಳಗಂ (ಖ), ಲೊಳಗೆ (ಗ), ಲಾಗಳೆ (ಚ). [5] (ಖಗ) ಗಳಲ್ಲಿಲ್ಲ. [6] ಸಿಂ (ಖಗ). [7] ಮಾನ್ಯರುಂ ಪಿರಿಯರುಂ (ಖಗ). [8] ಕೇಳಿಲೆಯಯ್ಯಾ (ಖಗ). [9] ಯ್ಯಲರಂ (ಖ), ಯ್ಯುವದೆನಲದಂ (ಗ), ಯಿ × × ಲವಂ (ಚ). [10] ನಾವಪ್ಪಡೆ (ಕ), ನಾನೇನಾದೊಡಂ (ಖಗ), ಆನಾದಡೆ (ಚ). [11] ವೇ (ಖ). [12] ಆತಂ (ಖ). [13] ಯರ (ಖಗಚ). [14]+ ಯಿವನ ಹೆಸರರು (ಖ), ಯಿವನ ಪೆಸರು (ಗ). [15] (ಖಗ) ಗಳಲ್ಲಿಲ್ಲ; ಯೆಂದೆ ಪೆಸರು (ಚ). [16] (ಜ) ದಲ್ಲಿಲ್ಲ. [17] ಟೆಂದೊಡಾ (ಗ), ಟುಯೆಂದಟ್ಟಾ (ಚ), ಟ್ಟೆಂದಟ್ಟಾ (ಜ). [18] ಮಾಡಲು ಹೆಣ್ಣಿನ (ಖಗ). [19] ಕೇಳ್ದು (ಖಗ). [20] (ಖ) ದಲ್ಲಿಲ್ಲ. [21] ದುದೆ ಸಾಕು (ಖಗ), - -.- ಕು (ಚ). [22]+ ಕೇಳಯ್ಯ (ಕ). [23] ಸಂತಸದೊ (ಖ), ನೀಂತೊದೊ (ಗ). [24]+ ಮಾಳ್ಪುದಂ (ಜ). [25]+ ದ (ಜ) [26]+ ಮಾಳ್ಪುದಿಲ್ಲ (ಕ).

ಶಿವನಂತಿರ್ದ ನೀ[1]ವೆ[1] ಬಂದು ತುಪ್ಪದ ಕೊಡನ[2]ನೊಡೆದು[2] ಕೆಡಹಿ ತೋರಣದ ತಳಿರಂ ಪಱಿದು [3]ತಿಱಿದು[3] ಘಳಿಗೆವಟ್ಟಲನೊಡೆದು [4]+ [5]ಕೆಡಹಿ[5] ಮೋಱೆಯಿಟ್ಟು ಶಿವದಿಟ್ಟು [6]ವೇದಿಕೆಯಂ ಕೆಡಹಿ[6] ಕುಲಂ [7]ಪೊಲ್ಲವೆಂದ[7] [8]+ ಬಳಿಕ್ಕಿನ್ನಾವ [9]ಮೂಗಂ[9] ಮುಂದಿಟ್ಟು ಮದುವೆ[10]ಯ ಮಾತನಾ[10]ಡಿದಪೆ[11]ವು- ಅ[11]ದಂತಿರ್ಕೆ ನೀವಿಲ್ಲಿಂದಂ ಹದುಳ[12]+ ಹೋದಡೆ ಸಾವಿರ ಮದುವೆಯ ಮಾಡಿದ ಸಂತಸಂ [13]ಅದಲ್ಲದೆ[13] ನೀವಱಿಸುವ ಸಂಬಿಯಣ್ಣಂ [14]+ ಬನದೊಳೈದನೆ [15]ಅವನೊ[15]ಡ ನಾಡಿಕೊಂಬುದು ಎಮ್ಮಂ ಕಾಡಲಾಗದು [16]ನಿಮ್ಮಡಿಗಳು[16] ಬಿಜಯಂ [17]ಗೆಯ್ವುದು ಸ್ವಾಮಿ ಎನಲ್-[17]

ಅಲ್ಲಿಂ ತಳರ್ದು ಮೋನದಿಂ ಸಾ[18]ಧು[18]ಬ್ರಾಹ್ಮಣನಂತೆ ಚಪ್ಪರದಿಂ ಪೊಱಮಟ್ಟು ಸೌಂದರಪೆರುಮಾಳೆಯಿರ್ದ ವಸಕ್ಕೆ ಬಂದು ಅಲ್ಲಿ ಮುಂದೆ [19]ನೆರೆ[19]ದಿರ್ದ ನೆರವಿಯಂ ಬಗಿದು- ಎನ್ನ ಭಕ್ತನ ಕೂಡಿ[20]ಕೊಂಡಿ[20]ರ್ದ[21]ವರೆಲ್ಲಂ[21] ಕೃತಾರ್ಥರಾಗವೇ[22]ಳ್ಕುಂ[22]ಬಂತೆ ಕುಳ್ಳಿರ್ದೋಲಗದ ಮಕುಟವರ್ಧನರನೆಡ[23]ಹುತುಂ[23] ತಾಗುತುಂ ಮೇಲುಗುಳು ಸಿಡಿಯೆ ಕೆಮ್ಮುತುಂ [24]ನಡುಗುತುಂ[24] [25]+ ಕೊಡೆಯುಂ [26]ಕೋಲುಂ[26] ಕಮಂಡಲ[27]ಮುಂ[27] ಪ್ರಮಾಣಪತ್ರಮುಂ

---

1 ಉ (ಖ), ವು (ಗ). 2 ನೆಡಹಿ (ಚ). 3 (ಖಗ) ಗಳಲ್ಲಿಲ್ಲ. 4 + ಹಸೆಯ ಜಗಲಿಗಳ ತುದಿಗಳ ಮೆಟ್ಟಿ (ಖ), ಕೆಡದು ಹಸೆಯ ಜಗಲಿಯ . . . (ಗ). 5 ಕೆಡದು (ಚ). 6 (ಖಗ) ಗಳಲ್ಲಿಲ್ಲ ; - - - ದರಿಗೆಡಹಿ (ಚ). 7 ಪೊಲ್ಲದೆಂದೆಂದ (ಕ), ಹೊಲ್ಲೆಂದು (ಖಗ), ಹೊಲ್ಲೆಂದ (ಚ). 8 + ನಿಮ್ಮ ತೊತ್ತಿನ ಮಗನೆಂದು ನುಡಿದು ಪತ್ರವಂ ತೋಱಿದ (ಖ:ಗ). 9 ಮೋಱೆಯಂ ಕೊಂಡುಬಂದು ಮದುವೆಯಾದಪಂ (ಕ) ; ಮುಗವ (ಖ), ಮೊಗಮಂ (ಗ), ಮುಗಮಂ (ಚ). 10 ಯಂ ಮಾ (ಖಗ), ಯಂ ಮಾತನಾ (ಚ). 11 ವದಂ ಬಿಟ್ಟವ (ಖಗಚ). 12 + ದಿಂ (ಖ), ದೊಳಿ<ಉ>(ಗಚ). 13 ಆದಪುದದಲ್ಲದೆ (ಕ), ಆದಡಂ (ಖ), ಹಾದೊಡೆ (ಗ), ಅದಲ್ಲದೆಯುಂ (ಚ). 14 + ·ಈ ಊರ ಹೊಱಗಣ (ಖ:ಗ). 15 ಆತನೊ (ಖಗ), ಅವರೊ (ಚಜ). 16 (ಖ) ದಲ್ಲಿಲ್ಲ. 17 ಗೈಉತ್ತಡಂ ಬಿದ್ದರೆ (ಖ), ಗೆಯ್ವದೆನುತ ಅಡ್ಡಂ ಬಿದ್ದು ಬೇಡಿಕೊಂಡರೆ (ಗ). 18 ದು (ಕಗಚ), ದ್ರ್ (ಖ). 19 ನಿಂ (ಖಗಚ). 20 (ಖಗಚ) ಗಳಲ್ಲಿಲ್ಲ. 21 ರೆಲ್ಲರುಂ (ಖಗಜ). 22 ಳ್ಕುಮೆಂ (ಗಚ). 23 ಹಿ (ಖಗ). 24 (ಗ) ದಲ್ಲಿಲ್ಲ. 25 + ಯಷ್ಟಿಯುಂ (ಚ). 26 (ಚ) ದಲ್ಲಿಲ್ಲ 27 ಉಮಂ (ಕ), ಲಂ (ಖಗ).

ಸಹಿತಂ ಒಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ ಕುಮಾರಂ ಕಂಡು- ಎಲೆ ಅಯ್ಯಾ ಏನನೆಳಸಿ ಬಂದಿರೊಳ್ಳಿತಪ್ಪ ಸಮಯಮೇನಾದೊಡಂ ಬೇಡಿ ಕೊಳ್ಳಿ[1]ಮೆ[1]ನಲಾ ಮಾತಿನೊಡನೆ ನಾಲಗೆಯ ಕೀಲುಚ್ಚಿದಂ[2]ತೆ ಎಲವೊ[2] ನಾಂ ಬೇಡಿ ಬರ್ಪನಂ ನೀಂ ಕೊಡುವ[3]ನಂ- ಏಕೆ[3] ತಪ್ಪುವುದಕ್ಕಕ್ಕ ನಡೆ ನಡೆ ನಿನ್ನಂ ಬೇಡಿ ಬಂ[4]ದು[4]ದುಂಟುಂಟು [5]+ ನೀನೆಮ್ಮ ತೊತ್ತಿನ ಮಗಂ ನಿನ್ನ ಪೆಸರು ನಂಬಿಯೆಂಬುದು- ಇನಿತು ದಿನಂ ಶುಶ್ರೂಷೆಗೆ ಸಮರ್ಥನಲ್ಲದ ಕಾರಣದಿಂ [6]ಬಾರದಿರ್ದೆವು- ಈಗಳು[6] ಹ[7]ತ್ತೆಂಟು[7] ಹರೆಯದ [8]+ ಗಂಡುದೊತ್ತಾದೆ ಏಳೇಳು ಕೊಡೆ[9]ಯುಮಂ[9] ಕಮಂ[10]ಡಲ[ಮು][10]ಮಂ ಪಿಡಿ[11]ಪಿಡಿ[11]ಯೆಂದು ಸಿಂಹಾಸನ[12]ದೊಳಗಿ[12]ರ್ದ ಕುಮಾರಂಗೆ [13]+ ನೀಡೆ ಕುಳ್ಳಿರ್ದ ಸಭೆ [14]ಕೌತುಕಂ[14]ಬಟ್ಟು ಮುಟ್ಟಬಾರ[15]ದ[15] ಮಾಹೇಶ್ವರನಾಗಿರ್ದಪಂ- ಎಂತು ಮಾಡು [16]ವವೆ[16]ನುತ್ತಮಿರೆ ಸೌಂದರ ಪೆರುಮಾಳೆ ಪಿರಿದು ಕೋಪದಿಂ ಹಾ[17]ಱು[17] ನೂಂಕಿ ಮೀಱಿ ನುಡಿವು[18]ತ್ತಿ[18] ಪಿಚ್ಚ ಬ್ರಾಹ್ಮಣನನೀ ಹೆಡ್ಡ ವೃದ್ಧನಂ [19]+ ತಂದವರಾರೊ ನೂಂಕು ನೂಂಕೆನಲಲ್ಲಿಯ ಪಡಿಯಱರು ಪಿಡಿದು ನೂಂಕೆ ಮುಟ್ಟದ ಮುನ್ನವೆ ತೊಟ್ಟನೆ ಬಿದ್ದು [20]+ ಬೆನ್ನ[21]ಳಿ[21]ಕಿದಂತುಸುರಂ ಪಿಡಿವುತುಂ ಕಾಲು ನೊಂದಂತೆ [22]ನೀಡಿ ನರಳುತುಂ[22] [23]ನಮಃ ಶಿವಾಯ[23] ನಮಃ ಶಿವಾಯಯೆನುತಿರ್ದ ವೃದ್ಧನನೆತ್ತಿ ತಂದು ತೋಪಿನ ಪೊಱಗಿಳುಪಿ ಬರ[24]ಲ್-[24]

ಅತಿವೇಗದೊಳಿರ್ದ ನಾಲ್ಕೆರಡಾಳುದ್ದ[25]ದದೊಂದು[25] ಕಾಣಲ್ಬಪ್ಪ

---

1 ಎ (ಖಚ), ಯ (ಗ), ಯೆ (ಜ). 2 ತೆ ಅಹುದಹುದೊ (ಕ), ತೆ ಎಲವೆಲವೊ (ಖಗ), ತೆಲೊ (ಜ). 3 ವಂ ಉಂಟುಂ ಎದೆಕೆನೇಕೆ (ಖ), ವನುಂಟುಂಟೇಕೆ (ಗಚ). 4 ದ (ಖಜ). 5 + ಅಕ್ಕಕ್ಕ (ಕ). 6 ಬಿಟ್ಟಿರ್ದಡೆ (ಗ). 7 ತ್ತೆರಡು (ಖಗ). 8 + ಬಲು (ಖಗಚ). 9 (ಖ) ದಲ್ಲಿಲ್ಲ ; ಯಂ (ಗಚ). 10 ಡಲು (ಕ), ಡುಲ (ಖ), ಡಲ (ಗಚಜ). 11 (ಖಚ) ಗಳಲ್ಲಿಲ್ಲ ; ಕೊ (ಗ). 12 ದ ಮೇಲಿ (ಖ), ದೊಳಿ (ಗ). 13 + ಕೈ (ಜ). 14 ಯಾಶ್ಚರಿ (ಖಗ), ಆಶ್ಚರ್ಯಂ (ಚ). 15 ದು (ಖಗಚಜ). 16 ವೆವೆ (ಕ), ವೆನೆ (ಖಗ), ವೆ (ಜ). 17 ರ (ಗ), ಱೆ (ಚ), ಱ (ಜ). 18 ತಿಪ್ಪ (ಖಚ), ತಿರ್ಪ (ಗ). 19 + ಕರ (ಖಗ). 20+ ತಲೆಯೊಡದಂತೊತ್ತಿಕೊಳುತಂ (ಖ: ಗ: ಚ). 21 ಳು (ಖಗಚ). 22 ನೀಡಿ ನಿಲುತಂ (ಖ), ನಿಡದಿಯಿಡುತ್ತುಂ (ಗ). 23 (ಖಗ) ಗಳಲ್ಲಿಲ್ಲ. 24 ಲಲ್ಲಿ (ಕ). 25 ದೊಂದು (ಕ), ದ (ಖಗ), ದೊಳೊಂದು (ಚ).

[1]ದಿಣ್ಣೆ[1]ಯಂ ಗಳಗಳನೇಱ ಕ[2]ಣಿ[2]ಗಿಲೆಯ ಸೊಪ್ಪಂ ಪಿಡಿದು [3]ಸಿಂಹ[3]ಧ್ವನಿಯಿಂ ಶಿವದಿಟ್ಟು ಇವಂ ನರಸಿಂಗವೊಸೆಯರ್ ಪೆತ್ತ ಮಗನಲ್ಲಂ ಕೊಂಡು ಸಾಕಿದವಂ- ಇವನ ಪೆಸರು ಸೌಂದರಪೆರುಮಾಳೆಯಲ್ಲ ನಂಜಿ[4]ಯೆಂಬುದು[4] [5]ತಂದೆತಾಯ್ಗಳ್[5] ಶಿವಬ್ರಾಹ್ಮ[6]ಣ[6]ರು ಜೆಡೆಯನಾಯನಾರು ಯಸ್ಯಜ್ಞಾನಿ ದೇವಿಯರೆಂಬ ಪೆಸರವಂದಿರೆನಗೆ [7]ಕುಲ[7]ವಳಿ[8]ಯ ಬಳಿದೊತ್ತಿರಪ್ಪುದಱಿಂ[8]ದೀ ನಂಬಿಯನೆನಗೆ ತೊತ್ತಿನ ಮಗನಾಗಿ ಕೊ[9]ಟ್ಟರ[9]ದಕ್ಕೆ ಪ್ರಮಾಣ ಪತ್ರಮುಂ ಸಾಕ್ಷಿಗಳುಂಟು [10]ಇ[10]ವಂ [11]ದೊಡ್ಡಿಯಾಳ್ಕುದುರೆಯಂ[11] ತೋಱಿ ಮಾಱಿ ಕಾಡಿದಡೆ- ಎನ್ನ ಸತ್ತ ಸಾವುಂ ಕೆಟ್ಟ ಕೇಡುಂ [12]+ ನಂಬಿ[13]ಯುಮಂ[13] ನರಸಿಂಗವೊಸೆಯ[14]ರುಮಂ[14] ತಾಗುವುದು- ಇದಂ ಚೋಳದೇಶದ ಮಹಾಗಣಂಗಳಱಿವುದೆಂದು ಕಯ್ಯೆತ್ತಿ ಶಿವದಿಡುತ್ತಿರಲ್-

ಇತ್ತ ಮಣಮಂದ ಪುತ್ತೂರಿಂದೊರ್ವಂ [15]ಪರಿ[15]ತಂದು ಮಯ್ಯಿಕ್ಕಿ ದೇವ [16]+ [17]ಇಂದೀಗಳೊರ್ವ[17] ವೃದ್ಧ[18]ಮಾಹೇಶ್ವರಂ[18] ಬಂದು [19]+ಚಪ್ಪರಮಂ ಮುಱಿದು ತೋರಣಮಂ ಪಱಿದು ವೇದಿಕೆಯಂ ಕೆಡಪಿ [20]+ಬಾಯ್ಗೆ ಒಂದುದನೆಂದು ಕಯ್ಗೆ ಬಂದುದಂ ಮಾಡಿ[21]+ದಂ- ಇದೆ[22]+ಮಗವಶಕುನಂ ಈ ಬಾರಿ[23]ಯ[23] ಮದುವೆಯುಳವಡದೆಸು[24]ತ್ತೆ- ಅವಂ[24] ಪೋಗಲದಂ ಕೇಳ್ದು

---

[1] ದಿಣೆ (ಕಚಜ), ಡಿಣೆ (ಖ). [2] ಣ (ಕಖಜ). [3] ಶಿವಯೆಂಬ (ಕ), ಸಿಹ್ಮದ (ಖ). [4] ಎಂದೆ ಪೆಸರು (ಖ. ಗ: ಚ). [5] ತಾಯ್ತಂದೆಗಳು (ಜ). [6] (ಖಜ) ಗಳಲ್ಲಿಲ್ಲ. [7] ಕಾಲು (ಖಗ). [8] ಯಿಂ ಬಂದ ತೊತ್ತಿರಪ್ಪ ಕಾರಣದಿಂ (ಚ). [9] ಟ್ಟು (ಚ). [10] ಮುಂಟಿ (ಕ). [11] ಮುಂದೊಡಿಯಾಳ್ಕುದುರೆಯಿಂ (ಖ), ಮುಂದೊಡ್ಡಿದಾಳ್ಕುದುರೆ ಆನೆ ಮಂದಿ ಮಾರ್ಬಲಮಂ (ಗ), × ದೊಡ್ಡಿ . . . (ಚ), ದೊಡ್ಡಿಹವನಾಗಿಯಾಳ್ಕುದುರೆಯಂ (ಜ). [12]+ ಯಿಾ (ಖಗಚ). [13] ಯಣ್ಣ (ಖಚ), ಯ (ಗ), ಯಂ (ಜ). [14] ರಂ (ಖಗಚ), ರ (ಜ). [15] ನಡೆ (ಖ). [16]+ ಶಿವದಿಡುತ್ತ ಕಣಗಿಲೆಲೆಯಂ ಕೈಯ್ಯಲಿ ಪಿಡಿಕೊಂಡಿರ್ದೀ (ಖ), ಯಿಾಗಳ್ ಶಿವದಿಡುತ್ತ . . . (ಗ). [17] ಯಿಂತೀಗಳೊರ್ವ (ಕ); (ಖಗ) ಗಳಲ್ಲಿಲ್ಲ; ಯಿಾಗಳಿಂತೊಬ್ಬ (ಚ) [18] ಬ್ರಾಂಹ್ಮಣಂ (ಖಗ). [19]+ ಮದುವೆಗಿಕ್ಕಿದ (ಖಗ). [20]+ ಘಳಿಗೆವಟ್ಟಲನೊಡದು ತುಪ್ಪದ ಕೊಡಂಗಳನೊಡೆಮೆಟ್ಟಿ (ಖಗ). [21]+ ಪೋ (ಜ). [22]+ ನ (ಕಖಗ). [23] ಗೆ (ಖಗ). [24] ತ್ತಂ<ತ್ತವಂ>ಸೌಂದರಂಗೆ ಬಿನ್ನಪಂ<ಹಂ> ಮಾಡಿ (ಖಗ).

ತುಂಬುರಂ ಮೊದಲಾದ [1]+ಮಂತ್ರಿಗಳೆದ್ದು [2]ದೇವ[2] ಈ ಬ್ರಾಹ್ಮಣನಲ್ಲಿ ಇಂತು ಮಾಡಿ [3]ಬಂ[3]ದಂ- ಇಲ್ಲಿ [4]ಪ್ರಮಾಣಪತ್ರಮುಂ[4]ಟೆಂದು ಶಿವದಿಡು ತ್ತಿರ್ದಪಂ- ಆತನಂ ಕರಸಿ ಕೇಳ್ದು [5]ಮುನ್ನೀ ತತ್ತ್[5] ಕಾರ್ಯಮಂ ತೀರ್ಚಿ ಕೊಂಬುದು ಅದಲ್ಲದೆಯುಂ ಮಾಹೇಶ್ವರಸಮಯ[6]ವತಿಬಲ್ಲಿತಿ[6]ಲ್ಲಿ ಚೋಳಾ ದಿಗಳಿಗುಬ್ಬಸವಲ್ಲಿ ಇಂದ್ರಾದಿಗಳು ಮಿಾಱಲಮ್ಮರು- ಅದುಕಾರಣಂ ಉದಾ ಸೀನಂ ಬೇಡ- ಇದಂ ಮಿಾಱಿದೊಡೆ ನರಸಿಂಗಮೊನೆಯರ್ ಮುನಿ[7]ವರ್- ಅ[7]ವರಂ ಕರೆದು ವಿಚಾರಿಸುವುದೆನುತ್ತೆ- ಆ ವೃದ್ಧಮಾಹೇಶ್ವರನಂ ಕುಮಾರನಲ್ಲಿ ಗೊಡಗೊಂಡು ಬರ್ಪಾಗ[8]ಳು[8] ತಾನೆ[9]ಮ್ಮ[9] ತೊತ್ತಿನ ಮಗಂ ತನ್ನ ಭವಮಂ ಮಱೆದನೆ ಎನ್ನ ಪರಿಯೆಲ್ಲವನೀಗಳೆ ತೋಱುಕೊಟ್ಟ[10]ಪಂ ತನ್ನೆ[10]ರವಿನ ಸಿರಿಯಂ ನಂಬಿ ಎನ್ನಂ ಮಱೆದಡಾಂ ಬಿಡುವನಲ್ಲೆಂದು ಕೆಲಬಲದವರ್ ಕೇಳ್ವಂತೆ ಗುಜು ಗುಜು[11]ಗೊಳು[11]ತುಂ ಬಂದು ಕುಮಾರನ ಮುಂದೆ ನಿಂದಿರ್ದು [12]ಮಾಣದೆ[12] [13]ಗೊಡವೆ[13]ಗುಟ್ಟುತಿರಲ್- ಎಲೆಲೆ ಪಿಚ್ಚ ಬ್ರಾಹ್ಮಣ ನಾನೆ ನಿನಗೆ ತೊತ್ತಿನ ಮಗ ನಾನೆ [14]ನಾನೆ[14] ಯೆನೆ [15]ನೀನೆ ನೀನೆ ಯೆಂ[15]ದು ಕೈ[16]ಪಿಡಿದೆಳೆವುದುಂ ಕೆರಳ್ದು ಕುಮಾರಂ[16] ಕೆಂಪಡರ್ದ ಕಂಗಳಿಂ ಕೆತ್ತುವ ಮಿಾಸೆಯಿಂ ನಡುಗುವ ಸರ್ವಾಂಗದಿಂ[17]ದೆದ್ದು[17] ವೃದ್ಧನಂ ಕೊಲ್ವೆ[18]ನಾದುದಕ್ಕೆಂ[18]ದು [19]+ ಕೈ ನೀಡಿ ತಿವಿಯ[20]ಲವ್ವಳಿ[20]ಸೆ ತುಂಬುರಾದಿಗಳೆಡೆವೊಕ್ಕು ಇರ್ವ[21]ರುಮಂ[21] ಬೇಱೆ ಬೇಱೆ ನಿಲಿಸಿ ಕುಮಾರನಂ ಬುಜ್ಜಯಿಸಿ [22]ಕೈಮುಗಿದು[22]

---

1 + ಮಹಾ (ಗ). 2 (ಗಚ) ಗಳಲ್ಲಿಲ್ಲ. 3 (ಖಗಚ) ಗಳಲ್ಲಿಲ್ಲ. 4 ಪತ್ರಪ್ರಮಾಣುಂ (ಖ), . . . ಣವುಂ (ಗಚ). 5 ಮುನ್ನತ (ಕ), ಮುನ್ನವೃತ್ತಾಂತ (ಖ), ಮುನ್ನವಿತತ (ಗ), ಮುನ್ನವಿ × (ಚ). 6 ಬಲ್ಲಿತ್ತಿ (ಖ), ವಲ್ಲದಿ (ಗ). 7 ದಪರ (ಕ). 8 ಳಾಗ (ಚ). 9 ನ್ನ (ಕ). 10 ಪೆನೆನುತ್ತುಂಯೆ (ಕ). 11 ಗುಟ್ಟು (ಕ). 12 (ಖಗ) ಗಳಲ್ಲಿಲ್ಲ. 13 ಗೊಡಗೊಡ (ಕ), ಗೊಣ (ಗ). 14 (ಚ) ದಲ್ಲಿಲ್ಲ. 15 ನಿನಿನಿನಿಯೆಂ (ಖ), ನಿನಿನಿಯೆಂ (ಚ), ನಿನಿನಿನೆಂ (ಜ). 16 ನೀಡಿ ನೀಡಿ ನುಡಿಯೆ ಕುಮಾರಂ ಕೇಳ್ದು (ಖ), ನೀಡಿ ನುಡಿಯೆ <ಯಲು> . . . (ಗಚ). 17 ದೀ (ಖ), ಯಿಾ (ಗ), ನೀ (ಚ) 18 ನೇನಾದೊಡಕ್ಕೆಂ (ಕ), ನೇನಾದುದಕೆ<ಕ್ಕೆ>ಂ (ಖಗ), ನು ಆದುದಾಗಲಿಯೆಂ (ಚ). 19 + ಯೆದ್ದು (ಜ). 20 ಲುರವಣಿ (ಖಗಚ). 21 ರಂ (ಖಗಜ). 22 (ಖಗಚ) ಗಳಲ್ಲಿಲ್ಲ.

[1]+ಹೋ ಎಲೆಯಯ್ಯಾ [2]ನಿಮ್ಮ[2] ಪ್ರಮಾಣಪತ್ರಮಂ ತೋ[3]+ಱಿಂದೀಸಿ ಕೊಂಡೊರ್ವ ಗ[4]ಣಕ[4]ನ ಕ[5]ಯ್ಯೊಳು ಕುಡಲವ[5]ನೋದಿದ[6]ನದೆಂತೆಂದೊಡೆ[6]

[7]ಮೊದಲ[7] ಈಶ್ವರ ಸಂವತ್ಸರದ ಮಾಘ ಬಹುಳ ಚತುರ್ದಶಿಯ [8]+ಸೋಮವಾರದಂದು ಭಕ್ತಪುರದ ಶ್ಮಶಾನ[9]ಶಯನ[9]ಭ[10]ಟ್ಟರ[10]ಗೆ [11]+ ಶಿವಬ್ರಾಹ್ಮಣ[12]ರ[12]ಪ್ಪ ಜೆಡೆಯನಾಯನಾರುಂ ಯಸ್ವಜ್ಞಾನಿದೇವಿಯರುಂ ತಾ[13]ವಿರ್ಗೆ[13] ವಂಶಾವಳಿಯಾಗಿ ಬಂದ [14]ಬಳಿದೊತ್ತಿರ ಮಕ್ಕಳಾದ[14] ಕಾರಣದಿಂ ತಮ್ಮ ಪುತ್ರ[15]+ ನಂಬಿಯಂ ಬಳಿದೊತ್ತಾಗಿ ಕೊ[16]ಟ್ಟರು[16] ಇಂತ ಪ್ಪುದಕ್ಕೆ ಸಾಕ್ಷಿಗಳು ತಿರು[17]ವೆಣ್ಣೆ[17]ನಲ್ಲೂರ ರುದ್ರಭಟ್ಟ[18]ರು[18] ಮಾಹೇಶ್ವರ ಭಟ್ಟ[18]ರು[18] ರುದ್ರಸಭಾಪತಿ[19]ಗಳು[19] ಈಶಾ[20]ನ[20]ಭಟ್ಟ[21]ರು[21] ಸಹಸ್ರವೇದಿ ಗ[22]ಳು[22] ಮೊದಲಾದ ಮಹಾಸಭ್ಯ[23]ರ ಸಾಕ್ಷಿ ಆ[23]ವೂರ ಗಣಕ ತಿ[24]ರುಚಿಟ್ಟಂ[24] ಬಲನು[25]ಳಘೆ[25]ಯರ [26]ಲಿಖಿತ[26]ವೆಂ[27]ದುಮಿ[27]ರಲದಂ ಕೇಳ್ದು ತುಂಬುರ ನಿಂತೆಂದಂ ಈ ವೃತ್ತಾಂತಮಂ ನರಸಿಂಗಮೊನೆಯರ್ಗಱುಪವೇಳ್ಕುಮೆಂದೊರ್ವ [28]ಚಾರ[28]ನ [29]ಕಯ್ಯೊಳು ಬಿನ್ನಯಿಸಿ[29] ಕಳುಪಲ್-

---

[1] + ವೃದ್ಧನಂ ಝುಂಕಿಸುತ್ತ (ಖ), . . . ಜೇಂಕಿಸುತೆ (ಗ), . . . ಝುಂಕಿಸಿ (ಚ). [2] ನಿನ್ನ (ಖಗ); (ಚ) ದಲ್ಲಿಲ್ಲ. [3]+ ಱುತೋ (ಖಗ). [4] ಣೇಶ್ವರ (ಖ). [5] ಯ್ಯೊಳೀಸಿ ಕೊಡಲು ಆತ (ಕ), ಯ್ಯ<ಯ್ಯೊಳ್>ಕೊಡಲು ಅವ (ಖಗ), ಯ್ಯೊಳು ಕೊಡಲು ಆ ಗಣಕ (ಚ). [6] ಕ್ರಮವೆಂತೆನೆ (ಖಗ). [7] (ಗ) ದಲ್ಲಿಲ್ಲ. [8]+ ಶಿವರಾತ್ರಿ (ಚ). [9] (ಖಗ) ಗಳಲ್ಲಿಲ್ಲ. [10] ಟ್ಟಂ (ಖಗ). [11] + ತಿರಿನಾವಲೂರ (ಖಗ). [12] ನ (ಖಗಚ). [13] ವೀರ್ವರುಂ<ರು>(ಖಗ), ವಿಬ್ಬರುಂ (ಚ). [14] ಬಳಿಬಳಿಯ ತೊತ್ತಿರಪ್ಪ (ಖಗ), ಬಳಿವಳಿದೊತ್ತಿರಪ್ಪ (ಚ). [15]+ ನಪ್ಪ (ಖ). [16] ಟ್ಟಿಊ (ಖಚ), ಟ್ಟಿವು (ಗ). [17] ವಂಣ (ಕ), ವೆಂಣ (ಜ). [18] ರುಂ (ಖಗ). [19] ಭಟ್ಟರುಂ<ರಂ>(ಖಗ). [20] ನ್ಯ (ಕಖಗಜ). [21] ರುಂ (ಖಗ). [22] ಳುಂ (ಗ). [23] ರ ಸಾಕ್ಷಿಯುಂ ಮಾ (ಕ), ರುಂ<ರು>ಸಾಕ್ಷಿಯಾ (ಖಗ), ರ ಸಾಕ್ಷಿಯಿಂ ಆ (ಚ), ರು ಸಾಕ್ಷಿ ಆ (ಜ). [24] ರಿ ಚಿಟ್ಟಂ (ಕ), ರು ಚಿಟ್ಟೆಂ (ಚ), ರು ಚಿಟ್ಟಾಂ (ಜ). [25] ಲಘೆ<ಘ್ಯೇ>(ಖಗ). [26] ಬರಹ (ಚ). [27] ದಿ (ಖಗಚ). [28] ಚಾರಕ (ಕಗ), ಚರ (ಖ). [29] ಕೈಯ್ಯ ಬಿನ್ನವತ್ತಳೆಯ (ಖ), ಕೈಯೊಳ್<ಳು> ಬಿನ್ನವತ್ತಳೆ<ಣೆ>ಯಂ (ಗಚ).

ಆವಂ ವಾಯುವೇಗದಿಂ ಒಂದರ[1]ಸನ ಚರಣದೊಳು ಬಿದ್ದು[1] ದುಃಖಾಕುಳನಾಗು[2]ತ್ತಿ[2] ಕಣ್ಣ ನೀರಿಂ ಜಿಗಿದ ಸೆರೆಯಿಂ [3]+[4]ಮುಂದುಗೆಡಿಸಿ[4] ದೇವದೇವಾ ಕುಮಾರಂ [5]ಶ್ರೋತ್ರಿಸ ಮಗಂ[5] ಶ್ರೋತ್ರಿಸ ಮಗನೆನುತ್ತಿರ[6]ಲ್-ಇದೇನಿದೇನೆನುತ್ತ[6]ವನಂ ಸಂತೈಸಿ ತಿಳಿಯ ಬಿನ್ನವಿಸೆನೆ [7]+[8]ದೇವ ಒರ್ವ [9]ವೃದ್ಧ[9]ಮಾಹೇಶ್ವರಂ ಬಂದು ಮದುವೆಯಂ ಕೆಡಿಸಿ[8] ಕುಮಾ[10]ರನಂ ನಿಮ್ಮ[10] ಮಗನಲ್ಲ ತನ್ನ ಶ್ರೋತ್ರಿಸ ಮಗನೆಂ[11]ದೊಂ[11]ದು [12]+ಪತ್ರಮಂ [13]ಪಿಡಿದು[13] ಶಿವದಿಡುತ್ತಿರ್ದಪಂ- ಆ [14]ಮಹಾ[14]ವೃದ್ಧನಂ [15]ಮುಟ್ಟಬಾರದು[15] [16]ನುಡಿಯಬಾರದು[16] [17]ನೋಂಕಬಾರದು[17] ಹರೆಯುವೆಂಬಡೆ ನೂಱು ಪರುಷ[18]+ [19]ಆದಟೆಂಬಡಖಂಡಿತ[19] ಇದಕ್ಕೆಂತು ಮಾಡು[20][ವ]ವೆಂ[20]ಬ [21]ಮಱುಮಾತಂ[21] ಕರುಣಿಪುದೆಲ್ಲರುಂ ಮುಂದುಗೆಟ್ಟಿರ್ದಪರೆನೆ ನರಸಿಂಗಮೊನೆಯರ್ ತಾಂ ಭಕ್ತನಪ್ಪುದಱಿಂ[22] +ದಿಂತೆಂದಂ ಮಾಹೇಶ್ವರ[23]ಸಮು[23]ಯದೊಳು ಪುಸಿಯ

---

[1] ಸಂಗಡ್ಡ ಬಿದ್ದು (ಖ), . . . ಬೀಳ್ದು (ಗ) [2] ತ<ತ್ತ>ವಂ (ಖಗ). [3]+ ಬಿಕ್ಕಿ ಬಿಕ್ಕಿ ಕಣ್ಣೀರಿಕ್ಕುತುಂ (ಕ). [4] (ಕಖ) ಗಳಲ್ಲಿಲ್ಲ. [5] (ಚ) ದಲ್ಲಿಲ್ಲ. [6] ಲ (ಖ). [7] + ಬಿನ್ನವತ್ತಳೆಯಂ ಕೊಡಲು ಪೋದುವಾಗಳು (ಚ), ಬಿನ್ನವತ್ತಳೆಯ ನೋಡಿಕೊಳ್ಳೆಂದು ಕೊಡಲದಂ [೧]ನೋಡುವಾಗ[೧] ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ನರಸಿಂಗಮೊನೆಯರ ಮಹಾರಾಯನ ದಿವ್ಯಶ್ರೀಪಾದಪದ್ಮಂಗಳಿಗೆ ದೇವರ ಬಂಟ ತುಂಬುರ ಸದುವಿನಯ ಭಯಭಕ್ತಿಯಿಂ ಸಾಷ್ಟಾಂಗಪ್ರಣುತನಾಗಿ ಮಾಡುವ ಬಿನ್ನಹ ನಾವು ದೇವರ ಕೈಯ್ಯ ಕಳುಹಿಸಿಕೊಂಡು ನಂಬಿಯಣ್ಣನ ವಿವಾಹಕ್ಕೆ ತಿರುಮಣಮಂದವುತ್ತೂರ್ಗೆ ಪೋಗಲೊರ್ವ [೨]ವೃದ್ಧ[೨]ಬ್ರಾಹ್ಮಣ ಮಹೇಶ್ವರಂ ಬಂದು ಮದುವೆಯ ಮನೆಯಂ ಪೊಕ್ಕು ತೋರಣಂಗಳಂ ಹಱಿದು [೩]+ಘಳಿಗೆವಟ್ಟಲಂ ಕೆಡಹಿ ಮದುವೆಯ ಹಸೆಯ ಜಗಲಿಯಂ ಕೆಡಹಿ ತುಪ್ಪದ ಕೊಡಂಗಳನೊಡಕುಟ್ಟಿ (ಖ· ಗ). [ಮು. ಪಾ.: [೧]ಪೊದಿಕೊಡೆ ಆಗ (ಗ). [೨](ಗ) ದಲ್ಲಿಲ್ಲ. [೩]+ಹಾಯಿಕಿ (ಗ)] [8] (ಖಗ) ಗಳಲ್ಲಿಲ್ಲ. [9] (ಚ) ದಲ್ಲಿಲ್ಲ. [10] ರಂ ನಿನ್ನ (ಕ). [11] (ಗಜ) ಗಳಲ್ಲಿಲ್ಲ. [12]+ ಪ್ರಮಾಣ (ಖಗಚ). [13] ಪಿಕೊಂಡು (ಖ), ಹಿಡಿದುಕೊಂಡು (ಗ), ತಂದು ಪಿಡಿದುಕೊಂಡು (ಚ). [14] (ಖಗ) ಗಳಲ್ಲಿಲ್ಲ. [15] (ಜ) ದಲ್ಲಿಲ್ಲ. [16] (ಚಜ) ಗಳಲ್ಲಿಲ್ಲ. [17] (ಖಗ) ಗಳಲ್ಲಿಲ್ಲ. [18] + ದ ಮೇಗಳ<ಲಱ> ಮಾತು (ಖಗ). [19] (ಖಗ) ಗಳಲ್ಲಿಲ್ಲ; ವಾದದೆಂಬಡವುಖಂಡಿತ (ಚ). [20] ವೆವೆಂ (ಕಜ), ವೆನೆಂ (ಖಗ), ವೆವೆಂ (ಚ). [21] ಪ್ರತ್ಯುತ್ತರ ನಿರೂಪಮಂ<ಮು>(ಖಗ) [22] + ಭಕ್ತಾನುಕಂಪಿಯಪ್ಪುದಱಿಂ (ಗಚ). [23] ವಿಷ (ಖಗಚ).

ನುಡಿಯ[1]ಲಾಗ[1]ದು- ಎಂತಪ್ಪುದೆಂದಱಿಯಲ್ಬಾರ[2]ದು ಎಂತುಂ ನಾವು[2] ಪೆತ್ತ ಮಗನಲ್ಲ ಕೊಂಡು ಸಾಕಿದ ಮಗನಪ್ಪು[3]+ದಿದಕ್ಕೆ ಧರ್ಮವೆಂತಿರ್ದುದಂತೆ [4]ಮಾಡುವುದೆಂದು ಬೆಸಸಿ[4] ಕಳುಪಲ್-

ಅವಂ ಕುಮಾರನಲ್ಲಿಗೆಯ್ತಂದು [5]ನ್ಯಾಯಮೇನಂ ಪೇಳ್ವೊಡಂ ಮಾಳ್ಪದೆಂದು ಬೆಸಸಿದರೆನಲ್- ಇದು[5] ಇಂತಾದು[6]ದೇವೆನೆ[6]ನುತಂ ನಂಬಿಯಣ್ಣನಾವೃದ್ಧಸಿರವಂ ನೋಡಿ [7]ಒಮ್ಮೊಮ್ಮೆ ಶಂಕಿಸುತ್ತುಂ ಒಮ್ಮೊಮ್ಮೆ ಕೋಪಿಸುತ್ತುಂ ಒಮ್ಮೊಮ್ಮೆ ಉಮ್ಮಳಿಸುತ್ತುಂ ಒಮ್ಮೊಮ್ಮೆ ಬೆಱಗಾಗುತುಂ[7] ಎಲೆಯಯ್ಯ [8]+ ನಿನ್ನ ಸಾಕ್ಷಿ[9]ಗೀಕ್ಷಿ[9]ಗಳ ನೋಡಿಕೊಂಬೆನೆನುತ್ತುಂ ತಿರುವೆಣ್ಣೆನಲ್ಲೂರ್ಗೆ ಪೊಱಮ[10]ಟ್ಟ[10]ಗಳು || ೧೭೦

## ಷಷ್ಠ ಸ್ಥಲಂ

---

1 ಬಾರ (ಖಗ). 2 ದವರೆಂಪಂತೆಮ್ಮ (ಖ.ಗ.ಚ). 3 + ದು ತಪ್ಪ (ಖಗಚ).
4 ಮಾಡುವುದು ಜಿಡೆಯನ್ನೆನಾರು ನಮಗೆ ಕೊಟ್ಟನೀ ಮಗಂ ಪೆತ್ತ ಮಗನಾದರೆ [1] + ಅವರು ಆಚೆಯೆಲ್ಲಿಂದ ತಂದರೊ ತಳ್ಳಿಬಳ್ಳಿಯಱಿಯಬಾರದು ಪತ್ರಸಾಕ್ಷಿ ಸಂಬಂಧ [2]ಧರ್ಮ[2]ವೆಂತಿರ್ದುದು ಧರ್ಮವ[3]ರದ[3] ಮುಂದೆ ಹತ್ತೆಂಟು ಹಿರಿಯರಂ ಕುಳ್ಳಿರಿಸಿ ಅವರು ಹೇಳಿದ ಹಾಂಗೆ ಮಾಡುವುದೆಂದು ತುಂಬುರಂಗೆ ಪ್ರತಿನಿರೂಪವಂ ಬರಸಿ (ಖ. ಗ). [ಮು. ಪಾ: [1] + ನಮಗೆ ಕೊಟ್ಟರೆ (ಗ) [2] (ಗ) ದಲ್ಲಿಲ್ಲ. [3] ದ (ಗ)]. ಮಾಡೆನ×ಂದು ಬೆಸಸಿ (ಚ). 5 ಬಂದೋಲಿಯುಂ ಕುಡಲೊಡಿಸಿಕೊಂಡು ನಂಬಿಯಣ್ಣನ ಮುಂದೆ ರಾಯರಾಯಸಂ ಪೋದಲು (ಖ), ಪೋಲಿಯುಂ ಕೊಡಲೊದಿಸಿ . . . ರಾಯರ ರಾಯಸಂ ಪೊದಲ್ (ಗ). 6 ದೆಯೆ<ಯ>(ಖಗ). 7 'ಒಮ್ಮೊಮ್ಮೆ ಶಂಕಿಸುತ್ತುಂ' ಎಂಬ ಭಾಗ ಮಾತ್ರ (ಖಗ) ಗಳಲ್ಲಿಲ್ಲ ; ಪೊಂಮೊಂಮೆ ಕಂಪಿಸುತ್ತ ಪೊಂಮೊಂಮೆ ಸಂತೈಸುತ ಪೊಂಮೊಂಮೆ ಬೆಱಗಾಗುತಂ ಪೊಂಮೊಂಮೆ ಉಂಮಳಿಸುತ್ತ (ಚ). 8 + ನಡೆನಡೆ (ಚ). 9 ಪತ್ರಗಿತ್ರಂ (ಖ), ಗೀಕ್ಷಿಪತ್ರಗಿತ್ರಂ (ಗ). 10 ಟ್ಟನಾ (ಖ).

# ೭ನೆಯ ಸ್ಥಲ

ಆನೆಯ ಮೇಲೆ ಕಂದಿ ಮಿಗೆ ಕುಂದುತಿದೇನನೊಡರ್ಚಿದಂ ಶಿವಂ
ತಾನೆನುತಲ್ಲಿ ತುಂಬುರನನೀಕ್ಷಿಸಿ ಪೇೞು[1]ತೆ[1] ಚಾತುರಂಗಮಂ |
ಜಾನಿಸಿ ನೋಡಿ ನೋಡಿ ಹೊಗೆ [2]ಹ[2]ತ್ತಿದ ಪುತ್ತಳಿಯಂತೆ ಬಂದನು-
ದ್ಯಾನವನೊಪ್ಪದಿಂ ಕಳಿದು ರಾಜಕುಮಾರ[3]ನಪಾರಚಿಂತೆಯಿಂ[3] ||

ಇಂತು ಚಿಂತಿಸು[4]ತ್ತೆ ಮಿಗೆ[4] ನಂಬಿಯಣ್ಣಂ ಬ[5]ರುತ್ತೆ[5]
ಮುಂತೆ ಚತುರಂಗಬಲವ[6]ಕ್ಕ[6]ಱುಂ [7]ನಡೆತರುತ್ತೆ[7] |
ಬಲದ ತೋಳ್ ಮುಡುಹು ಕಣ್ ಪುರ್ಬು ಕೆತ್ತುತ್ತುಮಿರೆ
ನಲಿನಲಿದು ನಂಬಿಯಣ್ಣಂ ನುಡಿದನೊಪ್ಪುತಿರೆ |
ಇನ್ನಿ[8]ವರ್ಗಾ[8]ಳ್ಪೆಸನುಂಟುಂಟು ತಪ್ಪುವುದೆ
ಇನ್ನೇ[9]ನೊ ಇವರ ಪತ್ರಂ ಗೆಲ್ಲದಿರ್ದಪುದೆ[9] |
ನೋ[10]ಡುವೆನೆನುತ್ತೆ[10] ತುಂಬುರನೊಡನೆ ನುಡಿವುತುಂ
ನಾಡೆ ತಿರುವೆಣ್ಣೆನಲ್ಲೂರ್ಗೆ ಮಿಗೆ ನಡೆವುತುಂ |
ಬರು[11]ತಿರಲ್ಕ[11]ಲ್ಲಿಯ [12]ಮಹಾಜನಂಗಳ್ ಕಂಡು[12]
ಹರುಷದಿಂ ಕನಕಯಜ್ಞೋಪವೀ[18]ತಂಗೊಂಡು[18] |
ಹೊನ್ನ ರನ್ನದ ಪವಿ[14]ತ್ರದ[14] ಕಾಣ್ಕೆಯಂ [15]ಕೊಂಡು[15]
ಉನ್ನತೇಶಂಗೆ ಮಂಗಳ[16]ದ್ರವ್ಯಮಂ[16] [15]ಕೊಂಡು[15] |

---

1 ತ (ಸ). 2 ಸು (ಖ). 3 ಕ ಚಿಂತೆಯಿಂದಲುಂ (ಚ). 4 ತ ಮಿಗೆ (ಖಗಚ), ತಮಿರೆ (ಜ). 5 ರಲು (ಖಚ), ರಲ್ (ಗ). 6 ಳ್ಕ (ಗ). 7 ಬರುತಿರಲು (ಖಚ), ಬರುತಿರಲ್ (ಗ). 8 ವಂಗಾ (ಖಗ). 9 ಕೆ ನುಡಿಯಿವನ ಪತ್ರಗೆಲದಿಪ್ಪುದೆ (ಖ). 10 ಡದೇನೆನುತ (ಕ). 11 ತಮಿರಲ (ಖಗಚ). 12 ಶಿವಬ್ರಾಂಹ್ಮರೈತಂದು (ಖ), ಶಿವ ಬ್ರಾಂಹ್ಮರುಂ ಕಂಡು (ಗ), ಶಿವಬ್ರಾಹ್ಮರೆಲ್ಲಂ ಕಂಡು (ಚ). 13 ತವ ತಂದು (ಖ). 14 ತ್ರಂ (ಖಗ), ತ್ರವ (ಚ). 15 ಕೊಟ್ಟು (ಖಚ). 16 ವಸ್ತುವಂ (ಖಗಚ).

ಬರೆ ಕಂಡು ಘುಡುಘುಡಿಸಿ [1]ಹೊಡೆಯಿವಂದಿರನೆ[1]ನುತೆ
ಪಿರಿಯರೆಂದಿ[2]ರ್ದ[ಡಿ]ಂದೀ ಪರಿಯೆ ನೀವೆ[2]ನುತೆ|
ನಡೆದು ಬಂದಾ ವೂರ ಮಂಟಪದ ಮುಂದಿಳಿದು
[3]ನಡುವೆ ಕುಳ್ಳಿರ್ದು ಕರೆ ಮಹಜನಂಗಳನೆಂದು|
ಕ[4]ರೆಯೆ[4] ಬಂದರ್ಗೆ ನುಡಿದಂ ಕುಮಾರಕನಂದು
ಉರವಣಿಸಿ ಕೋಪಿಸು[5]ತವೆಯ್ದಿ[5]ನದೆ [6]ಮನ[6]ನೊಂದು|
ನಿಮ್ಮೂರ ಕಡುಸಿತಗ[7]ನೊರ್ವ ವೃದ್ಧಂ[7] ಒಂದು
ಕೆಮ್ಮನೆಮ್ಮೊಳು [8]ಬಿಡದೆ[8] ಜಗಳವಾಡಿದನಿಂದು|
ತ[9]ನ[9]ಗೆನ್ನ ನಾಳೆಂದು ಪತ್ರಮಂ ತೋಱಿದಂ
[10]ತನತನಗೆ ನಿಮ್ಮೂರ[10] ಸಾಕ್ಷಿಯಂ [11]ಬೀ[11]ಱಿದಂ|
ಮಾಹೇಶ್ವರಂ ವೃದ್ಧನಾತನಂ ತೋಱಿಯೆನೆ
ಮಾಹಾತ್ಮನಂ ಬಲ್ಲೆನವ[12]ನ[12]ನೊಪ್ಪಿಸುವುದೆನೆ|
ಇಂತಪ್ಪ ದುಷ್ಟರೆಮ್ಮೂರೊಳಗೆ ತಾ[13]ನಿ[13]ಲ್ಲ
ಇಂತಪ್ಪ ಚಪಳರೆಮ್ಮೂರೊಳಗೆ ಮಱೆದಿಲ್ಲ|
ಎನು[14]ತ್ತೆಲ್ಲ[14] ಪಿರಿಯರಂ ಕರೆದು ತೋಱುತ್ತಮಿರೆ
ತನತನಗೆ ಶಿವಭಕ್ತರೆಲ್ಲರುಂ ಬರುತುಮಿರೆ|
[15]ಕಂಡಿವರ್ಗಳಲ್ಲಿವರ್ಗಳಲ್ಲೆಂದು [16]ನುಡಿವು[16]ತಿರೆ[15]
ತಂಡತಂಡದೆ ಬೇಱೆ ಬೇಱೆ [17]ಪೊಗಿಸುತ್ತ[17]ಮಿರೆ|

---

1 ಹೊಲ್ಲತಂದಿರಿಯೆ (ಕ). 2 ರ್ದರಿಂ - - - (ಕ), ರ್ದನಿವಿ ಪರಿಯೆ ಎಂದೆ (ಖ), ರ್ದನಿ ಪರಿಯೆ ಎಂದೆ (ಗ), ದ್ದೆ ವೀ ಪರಿಯೆ ನೀವಿಂದೆ (ಚ), ರ್ದರೆದಿಂತೀ ಪರಿಯೆ ನೀವೆ (ಜ). 3 (ಖ)ದಲ್ಲಿ ಇದಕ್ಕೆ ಹಿಂದೆ, ೧೫ ನೆಯ ಪಂಕ್ತಿ 'ನಡುವೆ ಬಂದಾ - - -' ಎಂದು ಪುನರುಕ್ತವಾಗಿದೆ. 4 ರಸಿ (ಚ). 5 ತವ್ಯೆದಿ (ಕ), ತವೇದಿ (ಖ), ತವೆಯಿದಿ (ಚ), ತವೇದಿ (ಜ). 6 ವಿಗೆ (ಖಗಚ). 7 ವೃದ್ಧನೊರ್ವಂ (ಜ). 8 ಒಂದು (ಕ). 9 ವ (ಕ). 10 ತವತವಗೆ ನಿಮ್ಮೂರ (ಕ), ತನಗೆದಿದನಿಮ್ಮೂರ (ಚ), ತನಗೆ ನಿಮ್ಮೂರವರ (ಜ). 11 ತೋ (ಖಗಚ). 12 ರ (ಗಚಜ). 13 ವಿ (ಚ). 14 ತಲ್ಲಿ (ಕ), ತೆಲ್ಲಿ (ಚ). 15 ಈ ಪಂಕ್ತಿ (ಖ) ದಲ್ಲಿಲ್ಲ. 16 ನೂಂಕು (ಗಚ). 17 ತೋಱುತ್ತು (ಕ), ಹಿಂಗಿಸುತ (ಖಚ), ಹಿಂಗಿಸುತ್ತು (ಗ).

ನಡುವೆ ಮೂಡಿದನಲ್ಲಿ ಜಗಳದ ಮಹೇಶ್ವರಂ
ಕೊಡೆ ಪಾದರಕ್ಷೆ ನರೆದಲೆ ಗಡ್ಡದೀಶ್ವರಂ |
ಬರು[1]ತೆ[1] ಶಿವಶಿವ ಕುಶಲವೇ ರುದ್ರಭಟ್ಟರೇ
ಹರಹರ ಕ್ಷೇಮವೇ ಈಶಾ[2]ನ[2]ಭಟ್ಟರೇ |
ಇವರಾರ್ ಸಹಸ್ರವೇದಿಗಳೇ ಮಹಾದೇವ
ಇವರಾರ್ ಶಿವಾನಂದರೇ [3]ಶಿವ[3] ಮಹಾದೇವ |
ಏ[4]ನಿ[4] ಪಶುಪತಿಭಟ್ಟರೇ ಸುಖದೊಳಿ[5]ರ್ದಿರೇ[5]
ಏನಿ ಶಂಕರಭಟ್ಟರೇ ಹದುಳವಿ[6]ರ್ದಿರೇ[6] |
ಎಂದವರ ಕುಲಗೋತ್ರದನ್ವಯಂಗಳು ವೆರಸಿ
ಬಂದು ನುಡಿವುತ್ತುಮಿರೆ ಸಭೆ ಕೌತುಕಂ ಬೆರಸಿ |
ಇವರೆಂ[7]ದರೊಬ್ಬರುಂ[7] ತಪ್ಪದೀ ಸಭೆಯೊಳಗೆ
ಇವರ[8]ನೆಂದೆಂದುವುಂ ಕಂಡಱಿಯೆವೂರೊಳಗೆ[8] |
ಎಮಗೆ ದಯಗೆಡಲಾಗದೆಲೆ ಕುಮಾರಕ ಯೆನುತೆ
ಎಮಗಿದು ವಿಚಿತ್ರವಾಗಿರ್ದಪುದು ಮನಕೆನುತೆ |
ಎಲೆಯಪ್ಪರೇ ನಿಮ್ಮ ನಾಮಮಂ ಪೇಳಿ[9]ಯೆ[9]ನೆ
ಎಲೆಯಯ್ಯ ಇಲ್ಲಿ ನಿಮ್ಮಯ ವೃತ್ತಿಯಾವುದೆನೆ |
ಎಮ್ಮ ನಾಮಮಂ ಮುನ್ನ ವಿಶ್ವೇಶ್ವರಪ್ರಭುಗ-
ಳೆಮ್ಮ ವರ್ಗಳೆಲ್ಲವೀ ಯೂರ [10]ಪಟ್ಟ[10]ದ ವಿಭುಗ- |
ಳೆಮಗೆ ಹದಿನಾಱು ಹರೆಯದೊ[11]ಳಿ[11]ಲ್ಲಿ ಪೊಱಮಟ್ಟು
ಕ್ರಮದಿಂದ ವಾರಣಾಸಿಗೆ ಸಂತಸಂಬಟ್ಟು |

---

1 ತ (ಸ). 2 ನ್ನ (ಕಖಗಜ). 3 (ಕ) ದಲ್ಲಿಲ್ಲ ; ಹರ (ಖಗ). 4 ನು (ಚಜ). 5 ರ್ದಪಿರೆ (ಕ), ದ್ದೀರೆ (ಖ), ದ್ದಿರೆ (ಗ). 6 ದ್ದೀರೆ (ಖ), ದ್ದಿರೆ (ಗ). 7 ದು<ದ>ದೊಂದುಉಂ (ಖಚ), ದುದೊಂದುವಂ (ಗ). 8 ನೆಂದುಂ ಕಂಡು ಅಱಿಯೆವೀ ಸಭೆಯೊಳಗೆ (ಖ), ನೆಂದೂ ಕಂಡು ವರಿಯೊ ಸಭೆಯೊಳಗೆ (ಗ), ದುಂ ಕಾಣದು ಅಱಿಯೆವೀ ಊರೊಳಗೆ (ಚ), ನಾಂರೆಂದುವುಂ - - - (ಜ). 9 ರೆ (ಖ). 10 ವಿಪುಟ್ಟ (ಕ), ಕಟ್ಟ (ಗ), ಪುಟ್ಟ (ಚಜ). 11 ಳ (ಜ).

ಎಮ್ಮ ಮಯ್ದುನ ವಿಷ್ಣುಭಟ್ಟನುಮನೊಡಗೊಂಡು
ಸುಮ್ಮಾನದಿಂ ಪೋಗಿ ಮಿಗೆಯೊಚ್ಚತಂಗೊಂಡು |[1]
ಪಲವು ವರುಷಮನಿರ್ದು ತಿರುಗಿ ಬರುತಿರೆ[2]ಲಂ[2]ದು
ನೆ[3]ಲೆ[3]ವಟ್ಟಣ[4]ಕ್ಕೆ ಬರೆ[4] ಸಡುವಿರುಳು ನಡೆತಂದು |
ಊರ ಹೊಱಗಣ ಮಸಣವಟ್ಟಿಗೆಯೊಳಿರೆ[5]ಲಂದು[5]
ಹಾರೈಸುತೆಮ್ಮ ಮಯ್ದುನನೊಲ್ದು [6]ನಗುತಂದು[6] |
ಏನಿ ಶ್ಮಶಾನ[7]ಶಯನರೆ ಎಂದು ಕರೆದಂದು[7]
ತಾನಾ[8]ಯ್ತು ಬಳಿಕವಾ ಪೆಸರೆಮಗೆ[8] ಸಲೆ ಸಂದು |
ಈ ಪೂರೊಳೆಮ್ಮ ವೃತ್ತಿಯ ಸ್ಥಳಂ [9]ಹೊಱಗೆ[9]ಯದೆ
ದೇವದಾ[10]ಯಕ್ಕಾಗಿ[10] ಕೊಟ್ಟ[11]ರೋ ಅಱಿಯೆ[11]ವದೆ |
ಎಂದು ತಮ್ಮಯ [12]ಕುಳಸ್ಥಳ[12]ಗಳಂ ಪೇಳುತಿರೆ
ಅಂದಾ ಕುಮಾರಂಗೆ ಕೋಪ[13]ವುಬ್ಬರಿ[13]ಸುತಿರೆ |
ನಿಮ್ಮಯ ವಿಚಾರವಂತಿರ್ಕೆ ಈ ಪತ್ರಮಂ
ಎಮ್ಮ ಮುಂದೋದಿಸಿರೆ [14]ಅಯ್ಯ[14]ನ ಕುಶಾಸ್ತ್ರಮಂ |
ಎನೆ ತೋಱುತೋಱು ಪ್ರಮಾಣಪತ್ರವನೆಂದು
ಅನುನಯದೊಳೀಸಿಕೊಂಡಿದು ಚೋದ್ಯವೆಂದಂದು |

---

[1] (ಜ) ದಲ್ಲಿ ಇದರ ಮುಂದೆ, 'ಹದಿನಾಱು ಹರೆಯದೊಳಲ್ಲಿ ಪೊಱಮಟ್ಟು' ಎಂದು ೪೯ ನೆಯ ಪಂಕ್ತಿಯ ಭಾಗ ಪುನರುಕ್ತವಾಗಿದೆ. [2] ಲೊಂ (ಜ). [3] ಲ (ಗ), ರೆ (ಚ). [4] ಕೆ ಬಂದು (ಕ). [5] ಲಲ್ಲಿ (ಖಗ), ಲ್ಕಲ್ಲಿ (ಚ). [6] ನಡೆತಂದು (ಕ), ನಗುತಲ್ಲಿ (ಖಗಚ). [7] ಭಟ್ಟರೆ ಎ<ಯ>ನಲ್ಕಂದಿಂದ (ಖಗ), ಶಯನರೆ ಎನಲ್ಕರದಂದು (ಚ). [8] ದುದೆನಗೆ ಬಳಿಕಾ ಪೆಸರು (ಕ), ಯಿತು ಬಳಿವೇಸರು ಎಮಗೆ ವಿಗೆ (ಖ), ಯಿತು ಬಳಿಕ ಪೆಸರೆಮಗೆ (ಗ), ಯ್ತು ಬಳಿಕ ಪೆಸರೆಮಗೆ ವಿಗೆ (ಚ). [9] ಬೇಱೆ (ಜ). [10] ನಕ್ಕಾಗಿ (ಕಗ), ನಕೆ (ಜ). [11] ನಾವರಿಯೆ (ಕ), ರೋ ಅಱ್ಱಿ (ಖ), ರೊವರಿಯ (ಗ), ರೋವಱಿಯೆ (ಚ), ರೊಯೇನೊ ಅಱಿಯೆ (ಜ). [12] ಸ್ಥಳಕುಳಂ (ಖಗಚ). [13] ಉದ್ಭವಿ (ಖ). [14] ಆಯ (ಖ), ಯಾಯಯ್ಯ (ಗ), ಯಯ್ಯ (ಚ).

ಓದೆಲವೊ ಗಣಕ [1]ಓದೆಂದೆನಲು ಕೈಕೊಂಡು[1]
ಓದಲು[2]ದ್ಯತ[2]ನಾ[3]ಗುತಾ[3] ಪತ್ರಮಂ ಕಂಡು|
ಕಣ್ಣ ನೀರ್ [4]ಸುರಿ[4]ಯೆ ಸೆರೆ ಬಿಗಿಯೆ ಬಿಕ್ಕುತ್ತಳುತೆ
ಅಣ್ಣ ಅಯ್ಯಾ ಅಪ್ಪ [5]ಎನುತೊಱಲುತಂತಳುತೆ[5]|
ನಿಮ್ಮ ಲಿಖಿತವನಿಂದು ಕಾಣಿಸಿದಿರೇ ಎನುತೆ
ನಿಮ್ಮ [6]ಪ[6]ರಿಯಪ್ಪ ಗಣಕರ್ ಪುಟ್ಟುವರೆ ಎನುತೆ|
ಇರೆ ನಂಬಿಯುಂ ಸಭೆಯುಮಾ ವೃದ್ಧನಂ ನೋಡಿ
ಪರಿ ಹೊಸತು [7]ಬಱ[7]ವೃದ್ಧನಲ್ಲೆನುತ್ತಂ ನೋಡಿ|
ಎಂತಕ್ಕೆ ಗಣಕನಂ ಸಂತೈ[8]ಸಿ ಓದಿಸಲು[8]
ಅಂತಂತೆ ಓದಿದಂ ಸಭೆ ಕೌತುಕಂಬಡಲು|
ಅಲ್ಲಿಯ ಮಹಾವೃದ್ಧರೆಲ್ಲರಂ ಪೆಸರ್ಗೊಂಡು
ಅಲ್ಲಿಯೆ ಬ[9]ರ್ದುಂಕಿರ್ದ ಕೆಲರಂ[9] ಪೆಸರ್ಗೊಂಡು|
[10]ಓದುತಿರೆ ತೋಱಿಂದು ಒಪ್ಪವಂ ನೋಡುತಿರೆ[10]
ಓದಲಾ[11]ಱದೆ[11] ತಮ್ಮ ಪಿರಿಯರಂ ನೆನೆವು[12]ತಿರೆ[12]|
ಅವರೆಲ್ಲ[13]ಳುತ್ತಿರಲಿದೆಲ್ಲಂ[13] ಕೃ[14]ತಕವೆಂ[14]ದು
ತವಕದಿಂ ನಂಬಿಯಣ್ಣಂ ಕೋಪಿಸು[15]ತ್ತಂ[15]ದು|
ನಿಮ್ಮ ಜೊತ್ತೆನ್ನನೇನಂ ಮಾಡಲಾಪು[16]ದ[16]ದು

---

[1] ಓದೆನಲ್ ಕೈಕೊಂಡು (ಕ), ವೋದೆಂದು ಕಯೊಳು ಕೊಂಡು (ಜ). [2] ದ್ಯುಕ್ತ (ಖಗ). [3] ದನಾ (ಕ). [4] ಕಱೆ (ಖ). [5] ಎಂದು ವೊದಱುತ್ತಳುತ್ತ (ಖ), ಯನುತ ವೊರಲುತ್ತಳುತ್ತ (ಗ), ಯೆನತ ವೊಱಲುತವಳುತ (ಚ). [6] ಸ (ಜ). [7] ಈ (ಕ). [8] ಸುತೊದ್ದೆನಲು (ಖ), ಸಿತ್ತೊದೆನಲ್ (ಗ), ಸುತೋದೆನಲು (ಚ). [9] ದುಂಕಿದರ್ ಕೆಲರಂ (ಕ), ದುಕಿರ್ದ ಕೆಲಬರಂ (ಖಗ), ದುಂಕಿರ್ದ ... (ಚ), ಬರ್ದುಕಿರ್ದರೆಲ್ಲರ (ಜ). [10] - - - ತೋಱುತಿರಲೊಪ್ಪ < ಪ್ಪ >ವಂ ನೋಡುತ್ತ (ಖಗ), ಓದುತ್ತ ತೋಱುತ್ತವೊಪ್ಪಮಂ ನೋಡುತ್ತ (ಚ). [11] ತಮ್ಮ ಸಭೆ (ಖ), ಸಭೆ (ಗ). [12] ತ್ತ (ಖಗಚ). [13] ವಳುತಲಿರಲೆಲ್ಲ (ಕ), ರಳುತಿರ - - - (ಖ), ನುತ್ತಿರ - - - (ಗ), ಳುತ್ತಮಿರಲೆಲ್ಲ (ಚ). [14] ತ್ತಿಮವೆಂ (ಕ), ತಕವುಯೆಂ (ಚ). [15] ತೆ ಅಂ (ಕ), ತ್ತ ಬಂ (ಖ), ತ ಬಂ (ಗಚ). [16] ದಿ (ಚ).

ನಿಮ್ಮ ವಶವೇ ಎನ್ನನಾಳ್ಮಾಡಿ ಕೊಂಬು[1]ದ[1]ದು|
ಎಂದು ಕೋಪಿ[2]ಸುತೆದ್ದು ಸೆಳೆದು ಸಟ್ಟಿಸೆ[2] ಸೀಳೆ
ಸಂದಣಿಸಿ ಶತಚೂರ್ಣವಾಗಿ ನೆಲದೊಳು ಬೀಳೆ|
ಹೋಗ[3]ದೆಲೆ[3] ಮಗನೆ ಇದು ಪಡಿಪತ್ರವೆಂದೆನುತೆ
ಆಗಳೇ ಬುದ್ಧಿಗೊಟ್ಟಳು ತಮ್ಮ ಸತಿಯೆನುತೆ|
ತಮ್ಮ[4]ರಸಿ[4]ಯರಸಲ್ಲಿ ಪೊಗಳುತುಂ [5]ಪಾಡು[5]ತುಂ
ತಮ್ಮ ಪತ್ರದ ಚೂರ್ಣ[6]ವೆಲ್ಲಮುಮನು[6]ಡುಗುತುಂ|
ಇದು ಪತ್ರವ[7]ಲ್ಲಲ್ಲ[7] ಮೂಲಪತ್ರಂ ಬೇಱೆ
ಅದೆ ಶಿವಾಲಯದೊಳಗೆ ತಮ್ಮರಸಿಯರು ನೀಱೆ|
ಬಯ್ತಿಟ್ಟಳೆಂದೆನುತೆ ಶಿವದಿಡುತೆ ದಡದಡಿಸಿ
ಸಯ್ತಿಟ್ಟುಕೊಳುತಂ[8]ಗಮಂ[8] ಬಱದೆ ಸಡಗರಿಸಿ|
ನುಡಿಯಲ್ಕೆ ಸಂಬಯಣ್ಣಂ ನೋಡಿ ಪೊಸತೆನುತೆ
ನಡೆ ನಿನ್ನ ಮೂಲಪತ್ರವನೆನಗೆ ತೋಱೆನುತೆ|
ಇರೆ ತೋರ್ಪೆನೆನ್ನೊಡನೆ ಬಾ[9]ರಾ[9] ಮಗನೆ ಎಂದು
ಹರನಲ್ಲಿ ವೃದ್ಧನಂತೊಪ್ಪಿ ನಡೆಗೊಳಲೆಂದು|
ನಡೆತಂದ[10]ನಲ್ಲಿ[10] ಕಾಲ್ನಡೆ[11]ಯಲ್ಲಿ[11] ಸೌಂದರಂ
[12]ನಡೆತಂದನೆಂತಪ್ಪುದೋ ಎನುತೆ ಸೌಂದರಂ[12]|
ಹಿಂ[13]ದುಗೊಂಡೆಯ್ತ[13]ರುತೆ ಬೆಬ್ಬಳಿಸಿ ನೋಡುತುಂ
ಹಿಂ[14]ದೆಲ್ಲವಂ[14] ಮಱದು ಚಿಂತೆಯೊಳಗಾಳುತುಂ|

---

[1] (ಖ) ದಲ್ಲಿಲ್ಲ, ದಿ (ಗಚ). [2] ಸಿ ಸೆಳದುಕೊಂಡು ಪತ್ರವ (ಖಗ). [3] ದಿದು (ಜ). [4] ಸತಿ (ಖಗ). [5] ಹುಡುಕು (ಖಗ). [6] ಮುಮನೆಲ್ಲಉ<ವು>(ಖಗ), ವೆಲ್ಲವಂನು(ಚ). [7] ಹುದಹುದು (ಚ). [8] ಮನಂ (ಖಗಚ). [9] ರ (ಖಗಜ), ರೆಲೆ (ಚ). [10] ನಂದು (ಜ). [11] ಯೊಳಗೆ (ಖಗಚ). [12] - - - ಯೆನುತ ಸೌಂದರನಂದು (ಕ), ನಡೆತಂದನೇನಪ್ಪುದೋ ಯನುತ - - (ಗ), ನಡೆತರುತ್ತಂತಪ್ಪುದೋ ಯೆನುತ್ತುಂ ಕರಂ (ಜ); ಈ ಪಂಕ್ತಿ (ಖ) ದಲ್ಲಿಲ್ಲ. [13] ದೆ - - - (ಕಜ), ದುಹಿಂದನೆ ಬ (ಖಚ), ದುಹಿಂದಕೆ ಬ (ಗ). [14] ದನೆಲ್ಲಂ (ಗ).

ಬರೆ ವೃದ್ಧಮಾಹೇಶ್ವರಂ ಶಿವಾಲಯದೊಳಗೆ
ಕೆರಹುಗಳೆಯದೆ ಪುಗಲು ಸೌಂದರಂ ಮನದೊಳಗೆ |
ಕೋಪಿಸುತೆ ಕೊಲುವೆನೀ ವೃದ್ಧಪಾರ್ವನನೆನುತೆ
ತಾಪಿಸುತೆ ತೋಱಲಗನೆಸುತೆ ಹತ್ತಿರೆ ಬರುತೆ |
ಒಳಪೊಗಲು ನೋಡನೋಡಲು ಲಿಂಗದೊಳಪೊಗಲು
ತಿಳಿವುಳಿದು ಬೆಱಗಾಗಿ ನೆಱೆ ಕೌತುಕಂ [1]ಮಿಗ[1]ಲು |
ಮೆಲ್ಲಮೆಲ್ಲನೆ ಪೂರ್ವವಾಸನೆ ಮನಕೆ ತೋಱೆ
[2]ಇ[2]ಲ್ಲಿ ಪುಟ್ಟಿದುದೆಲ್ಲ ಕನಸಿನಂ[3]ದದೆ[3] ತೋಱೆ |
ಎಲ್ಲಿರ್ದೆನೇನಾದೆನೆಂದು ಚಿಂತಿಸುತಿರಲು
ಎಲ್ಲವುಂ ಕ್ರಮದಿಂದವಱಿಯಲ್ಕೆ ಬರುತಿರಲು |
ಬಂದನಪ್ರತಿಮನಂಗಜವಿಮರ್ದನನೆಂ[4]ಬ[4]
ಬಂದನುದ್ಧತಶೀಲ[5]ತ[5]ರಕಾಲಹರನೆಂ[4]ಬ[4] |
ಅಮೃತಮಥನೋದ್ಭೂತ ವಿಷಮವಿಷಧರನೆಂ[4]ಬ[4]
ಅಮಮ ಬಂ[6]ದಂ[6] ಜನನಮರಣವರ್ಜಿತನೆಂ[4]ಬ[4] |
ದೇವಸಂತಾನಗುರು ದೇವವಲ್ಲಭನೆಂ[4]ಬ[4]
ದೇವಗತಿ ದೇವಮತಿ ದೇವದುರ್ಲಭನೆಂ[4]ಬ[4] |
ಕರೆವ ಬಿ[7]ರು[7]ದಿನ ಕಹಳೆಗಳ ಮಹಾರವದೊಳಗೆ
ಧರೆ ನಡುಗೆ [8]ಪೊಡೆವ[8] ಭೇ[9]ರಿಯ[9] [10]ಘನ[10]ಧ್ವನಿಯೊಳಗೆ |
ಮೇಲೆ ತರದಿಂ ತುಱುಗಿ ತಳಿತ ಬೆಳ್ಗೊಡೆಯೊಳಗೆ
ಮಾಲೆಗೊಂಡೆಯ್ತಪ್ಪ ದೇವಗಣತತಿಯೊಳಗೆ |
ಶಾಂತಾರ್ಕಕೋಟಿಪ್ರಭಾಪುಂಜದಿಂ ಬೆಳಗೆ
ಮುಂತೆ ಶಿವಮೂರ್ತಿ ಜಗವೆಲ್ಲಮೊಳು ತೊಳತೊಳಗೆ |

---

[1] ಬಡ (ಖಗ). [2] ಅ (ಕ). [3] ದದಿ (ಕಚ), ತಿರೆ (ಖ). [4] ದು (ಖಗಚ).
[5] ಕ (ಖ); [ಖ]? [6] ಧನ (ಕ). [7] ರಿ (ಕಖಚಜ). [8] ಹೊಯಿವ (ಖಚ), ಹೊಯ್ವ (ಗ).
[9] ರೀ (ಖಗಚ). [10] ಮಹಾ (ಖ).

ದಶಭುಜಂ ಪಂಚವಕ್ತ್ರಂ ತ್ರಿಣೇತ್ರದಿಸೊ[1]ಪ್ಪಿ[1]
ಶಶಿಕಳೆ ಜಟಾಭ[2]ರಂ[2] ಗಿರಿಜೆ [3]ತ್ರಿಸುಳದಿಸೊಪ್ಪಿ[3]|
ಇರೆ ಕಂಡು ನಂಬಿಯಣ್ಣಂ ಪೂರ್ವಮಂ ನೆನೆದು
ಪರಿತಂದು ಚರಣ[4]ತಳದೊಳು ಬೀಳುತುಂ ನೆನೆದು[4]|
ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ
[5]ತಕ್ಕಳಿದು ತಡವಾಗಿ[5] ಹೊರೆಯೇಱ ನೋಡುತುಂ|
ಇನಿತು ದಿವಸಂ ವೃಥಾ ಸವೆದೆನೆಲೆ ಶಿವ ಎನುತೆ
ಇನಿತು ಕಾಡುವರೆ ನಂಬಿರ್ದ ಭೃತ್ಯನನೆನುತೆ|
ಇರ್ದ ನಂಬಿಯನೆತ್ತಿ ತ[6]ಕ್ಕೈ[6]ಸಿ ಶಂಕರಂ
ಸಾರ್ದು ಮೂರ್ಧ್ನಿಘ್ರಾಣಮಂ ಮಾಡುತೀಶ್ವರಂ|
ಇನಿತು [7]ಬೇಗಂ[7] ಮಗನೆ ಕಾಡಿದವ[8]ರ್ನಾವ[8]ಯ್ಯ
ಇನಿತು ನಿನ್ನಂ ಬಳಲಿಸುತ್ತಿರ್ದವಾವಯ್ಯ|
ಹಾಡಯ್ಯ ನಂಬಿಯೆನುತುಂ ತಾಳಮಂ ಕುಡಲು
[9]ಹಾಡಯ್ಯ ಹಾಡೆನುತೆ[9] ಹರು[10]ಷದಿಂದಂ ಮಿಗ[10]ಲು|
ದೇವ ಹಾಡಿಸಿಕೊಂ[11]ಬಡಾಂ[11] ಹಾಡಬಲ್ಲೆನೇ
ದೇವ ಆಡಿ[12]ಸಿಕೊಂಬಡಾ[12]ನಾಡಬಲ್ಲೆನೇ|
ಎಂದೆನಲು ನೀನೆಮ್ಮ ನಾ ಪುರದ ಬನದೊಳಗೆ
ನೊಂದು ಪಿಚ್ಚ[13]ನೆ[13] ಎಂಗು ಬಯ್ದಂತೆ ಹಾಡಿಳೆಗೆ|
ಹಾಡಲ್ಕೆ [14]ನಿನಗೆ ಮತಿಯುಂ ದನಿಯನೀವೆನೆನೆ[14]

---

[1] ಪ್ಪಿ (ಗ). [2] ರಣ (ಖಗ). [3] ಯೆಡದೊಳಗೊಪ್ಪೆ (ಕ), ಸಹ ಮೃಡನೊಪ್ಪೆ<ಪ್ಪಿ> (ಖಗ), ಶೂಲದಿನೊಪ್ಪೆ (ಚ). [4] ದೊಳು ಬೀಳುತಂ ನೆನನೆನದು (ಕ). [5] ಉಕ್ತಿ ತಡ ಬಡವೋಗಿ (ಖ), ತಳಿರ್ದು ತಡಬಡವಾಗಿ (ಗ). [6] ಳ್ಕೈ (ಗ). [7] ಹೊತ್ತುಂ (ಖ), ಪೊಳ್ತುಂ (ಗ). [8] ನಾನ (ಕ), ರಾರ್ನೆ (ಖ). [9] ಹಾಡುಹಾಡೈಯ್ಯ ನೋಡುತ್ತ (ಖ), ಹಾಡುಹಾಡೆಂದು ನೋಡುತ್ತ (ಗಚ). [10] ಷಂಬಡ (ಖಗಚ). [11] ಬೆನಾಂ<ನಾ> (ಖಚ). [12] ಸುತಿರ್ಪನಾ (ಖಚ), ಸುತಿರ್ಪಯಾಂ (ಗ). [13] ರೆ (ಕಜ). [14] - - - ಧನಿಯನಿತ್ತವನೆ (ಕ), ಮತಿಯ ಧ್ವ<ಧ>ನಿಯಂ ನಿನಗೆ ಯೀವೆನೆನೆ (ಖಗ).

ಬೇಡಿದುದನಿತ್ತು ಸಲಹುವೆ[1]ಸಂ[1]ಜಲೇವುದೆನೆ |
ಕೃತಕೃತ್ಯನಾಗುತುಂ ನಂಬಿಯಣ್ಣಂ ಬಿಂದು
ನತನಾಗಿ ಶಂಭುವಂ ಹಾಡತೊಡಗಿದನಂದು |
ಪಿಚ್ಚನೇ ಪೆಱೆಸೂಡಿ[2]ದನೆ ಪರಮ[2]ಪಶುಪತಿಯೆ
ಅಚ್ಚಸವಿಯೇ ಸುಖವೆ ಸಖನೆ ನಂಬಿಯ ಪತಿಯೆ |
ನೀನೆ ಆಳ್ಮಾಡಿಕೊಳಲಲ್ಲೆನಲ್ ಬಪ್ಪುದೇ
ನೀನೆ ತೊ[3]ಳ್ತ್ರಾಳ್ವ[3]ಡಿನ್ನಲ್ಲೆನಲ್ ಬಪ್ಪುದೇ |
[4]ನೀನೆ ಬಂದಾಳ್ಮಾಡೆ ಯುಕ್ತಿ ಕೊಂಬುದೆ ದೇವ[4]
ನೀನೆ ಬಂದಾ[5]ಳೆಸಲು[5] ಧರ್ಮವುಂಟೇ ದೇವ |
ಪ್ರೇರಕಂ ನೀಂ ಬರಲು ಸಾಕ್ಷಿಯುಂಟೇ [6]ತಂದೆ[6]
ಮಾರಾರಿ ನೀಂ ಬರೆ ಪಚಾರವುಂಟೇ [6]ತಂದೆ[6] |
ಇನ್ನೇನು ತೊತ್ತಾದೆನಲ್ಲೆನಲ್ ಬಪ್ಪುದೇ
[7]ಇನ್ನಂತುವಿಂತುವೆಂತುಂ[7] ಹೊಳೆಯಬಪ್ಪುದೇ |
ಮಚ್ಚಿ ಬಂದಾಳಾದೆನಲ್ಲೆನಲ್ ಬಪ್ಪುದೇ |
[8]ನಚ್ಚಿ ನಿನಗಾಳಾದೆನಲ್ಲೆನಲ್ ಬಪ್ಪುದೇ[8]
ಎಂದು ಹಾ[9]ಡಲು[9] ನಂಬಿಯಂ ನೇಹದಿಂ ನೋಡಿ
[10]ಹೆಂ[10]ದದಾನಂದದಿಂ ಸಮಸುಖದೊಳೋಲಾಡಿ |
ಎಲ್ಲೆಲ್ಲಿ ದೇವಾಲಯಂಗಳುಂಟಾದಲ್ಲಿ
ಅಲ್ಲಲ್ಲಿ [11]ನಿಚ್ಚಂ ಸಹಸ್ರ [12]ಪೊನ್ಗ[12]ಳನಲ್ಲಿ[11] |

---

[1] ವಂ (ಕ). [2] ಪರಮನೇ (ಚ). [3] ತ್ರಾಳ್ವ (ಕಖಚ), ತ್ರಾಳ್ದ (ಗ). [4] ಈ ಪಂಕ್ತಿ (ಖಗ) ಗಳಲ್ಲಿಲ್ಲ. [5] ಳ್ಮಾಡೆ (ಖಗ). [6] ದೇವ (ಚ). [7] ಇನ್ನೆಂತು - - - (ಕ), ಇನ್ನಂತುವಿಂತು ಎಂದುಂ (ಖ), ಇನ್ನೆಂತುವೆ<ವಿ>ಂತುಂ (ಗಚ). [8] ಯಿಂನೆಂತುವಿಂತುವೆಂತುಂ ಹೊಳೆಯ ಬಪ್ಪುದೇ (ಗ); ಒಚ್ಚತಂ ಕೊಂಡು ನಿನ್ನೊಳು ಹೊಳೆಯಬಪ್ಪುದೇ (ಚ). [9] ಡಿದ (ಖಗಚ). [10] ಹೊಂ (ಗ). [11] ನಿಚ್ಚನಿಚ್ಚಂ ಹೊನ್ನನಾವಲ್ಲಿ (ಚ). [12] ಪೊಂಗ (ಕಗ), ಹೊಗ (ಖ).

ಕೊಡುತೆ [1]ಬಂದಪೆವು ನೀಂ[1] ಸುಖದೊಳಿರ್ಪುದು ನಂಬಿ
ನಡೆದು ರಾಜ್ಯಂಗೆಯ್ದು ಹದುಳವಿರ್ಪುದು ನಂಬಿ |
ಮೊದಲೀ ಶಿವಾಲಯದ [2]ಪೊನ್ಗ[2]ಳಿವೆ ಕೊಳ್ಳೆಂದು
ಮುದದಿಂದೆ ನಂದಿಯುಂಡಿಗೆಯ [3]ಪೊನ್ಗಳ್[3] ತಂದು |
ಕೊಟ್ಟು ತಲೆಯೊಳ್ ಕಯ್ಯನಿಟ್ಟು ಶಶಿಶೇಖರಂ
ನೆಟ್ಟನಂತರ್ಧಾನದೊಳ್ ನಂದನೀಶ್ವರಂ ||

## ಸಪ್ತಮ ಸ್ಥಲಂ

---

[1] ಬಪ್ಪೆಉ<ರ್ಪೆವು> ನೀನು (ಖಗ). [2] ಪೊಂಗ (ಕ), ಹೊಂಗ (ಖಗಚ). [3] ಪೊಂಗಳ (ಕ), ಹೊನ್ನಂ (ಖಗಚ).

# ೮ನೆಯ ಸ್ಥಲ

ಕೃಪೆಯಿಂದಂ ನಡೆತಂದು ನಂಬಿದ ಸುತಂ ಸಂಸಾರದೊಳ್ [1]ನೋಯ[1]ಲಿ-
ರ್ದಪರಾಧಂಗಳನೆಯ್ದೆ ಮಾಣಿಸಿ[2]ಯಜಸ್ರಂ[2] ನಂಬಿಯಂ ತೊತ್ತುಗೊಂ- |
ಡು ಪದಾಂಭೋಜಮನಲ್ಲಿ ತೋಱಿ ಶಿವಲಿಂ[3]ಗಾಂತ[ಃ][3]ಸ್ಥನಾದಂ ವಿಯ-
ತ್ತ್ರಿಪುರಾರಣ್ಯದವಾಗ್ನಿ [4]ಹಂಪೆಯ[4] ವಿರೂಪಾಕ್ಷಂ ಲಲಾಟೇಕ್ಷಣಂ ||

ಇಂತು ತಿರುವೆಣ್ಣೆನಲ್ಲೂರೊಳ್ ನಂಬಿ[5]ಯಣ್ಣನಂ[5] ತೊತ್ತುಗೊಂಡು ಸರ್ವಬ್ರಹ್ಮಾಂಡಸಾರ್ವಭೌಮಂ ಸಕಲ[6]ದೇವ[6]ದೀಕ್ಷಾಗುರು ಅನಂತದೇವಗಣ [7]ಪರಿಶೋಭಿತಂ ಅ[7]ನೇಕ[8]ದೇವರು[8]ಗಳನುಗುಳ್ವ ಘುಟಿಕಾಸಿದ್ಧಂ ಬೀಜದೊ[9]ಳು ಮರಂ[9] ಪುಗುವಂತೆ ಮರದೊಳಗ್ನಿ [10]ಪುಗು[10]ವಂತೆ ಅಗ್ನಿಯೊಳುಷ್ಣಂ ಪುಗುವಂತೆ ಶಿವಲಿಂಗದೊಳ್ ಪುಗಲಿತ್ತಲು ನಂಬಿಯಣ್ಣಂ ಶರ್ವಕಾರುಣ್ಯಸಾಮ್ರಾಜ್ಯ ಸದ್ಭ[11]ಕ್ತಿ[11]ಸಾರ್ವಭೌಮನಾಗಿ ಅನಾಥ[12]ತ್ವಂ[12] ಪಿಂಗಿ ಸನಾಥನಾಗಿ ಉನ್ನತಮಹಿಮಂ ತನ್ನ ಮುಂದಿರ್ದ [13]ಚಾ[13]ತುರಂಗ ಬಲಮಂ [14]ನಡೆ[14] ನೋಡಿ [15]ನಮಗೆಯು ನಿಮಗೆಯು[15] ಸೊಮ್ಮು ಸಂಬಂಧವಿಲ್ಲ ನೀವೆ[16]ಲ್ಲಂ[16] ನಿಮ್ಮರಸನಲ್ಲಿಗಿರದೆ ಪೋಪುದೆನೆ ತುಂಬುರನುಳಿ[17]ಯಲುಳಿದರೆಲ್ಲಂ[17] ನರಸಿಂಗಮೊನೆಯರ ಪುರಕ್ಕೆ ಪೋಗೆ ತುಂಬುರಂ ತನ್ನ ಮನದೊಳ್ ವಿಚಾರಿಸಿ ನೋಡು[18]ತ್ತಿ್ರೀತಂ[18] ಮಹಾಸಾಮರ್ಥ್ಯಪುರುಷನೀತನಂ ಬಿಡಲಾಗದೆಂದು

---

1 ಮುಳುಗ (ಖ). 2 ನಿರಂತಂ (ಚ). 3 ಗಾಂತ (ಕಜ), ಗಾತ್ಮ (ಖ), ಗಾತ (ಗ), ಗಂತ (ಚ). 4 ಯೊಪ್ಪಿದ (ಖ). 5 ಯಂ (ಖ). 6 ಗುರು (ಗ). 7 ಪಶುಪತಿಗಳನ (ಗ). 8 ದೈವ (ಖಗ), ದಯಿವಂ (ಚ). 9 ಳು ವೃಕ್ಷ<ಕ್ಷಂ> (ಖಚ), ಳ್ ವೃಕ್ಷಂ (ಗ), ಳಂಕುರಂ (ಜ). 10 ಪುಟ್ಟು (ಕ), ಪೊಗು (ಖಗಚಜ). 11 ಕ್ತ (ಕ). 12 ನಾಥನಂ (ಕ). 13 ಚ (ಖಗಚ). 14 (ಖಗ) ಗಳಲ್ಲಿಲ್ಲ. 15 ನಿಮಗೂ ನಮಗೂ (ಖ), ನಿಮಗಂ ನ<ವೆ>ಮಗಂ (ಗಚ), ನಮಗೆಯೂ ನಿಮಗೆಯೂ (ಜ). 16 ಲ್ಲ (ಕಜ), ರೂ (ಖ), ರುಂ (ಗ). 17 ದೆಲ್ಲರು<ರುಂ> (ಖಗ). 18 ತ್ತಿ (ಕಜ), ಡಿಯಾತಂ (ಖ), ಡುತ್ತಿತ್ತೀ (ಗ).

ಶಿವಂಗೆ ನಂಜಿ ತೊತ್ತಾಗಲು ನಂಬಿ[1]+ಗೆ [2]ತಾಂ ತೊತ್ತಾಗಿ[2] [3]ದೇವಾ ನಿನ್ನಂ[3] ಬಿಡೆನೆನ್ನಂ ಬಿಡದಿರೆನೆ ಸೌಂದರಂ ಸಂತಸಂಬಟ್ಟಾತನನಾಳ್ಗೊಂಡು [4]ಬಾಳ್ಗೆನ್ನ ಭಾಳಾಕ್ಷನೆನುತೆ ಪಿನಾಕಿ[4] ಕೊಟ್ಟ ಪೊಟ್ಟಣ[5]ಮಂ ಬಿಟ್ಟು[5] ಭಕ್ತಗಿರ್ಗಿತ್ತು [6]ಯುಕ್ತಗಿರ್ಗಿತ್ತು[6] [7]+ [8]ಬಂದರ್ಗಿತ್ತು[8] ನಿಂದರ್ಗಿತ್ತು [9]+ ಬೇಡಿದರ್ಗಿತ್ತು ನೋಡಿದರ್ಗಿತ್ತು ಮಾರಾರಿಯ ಕಾರುಣ್ಯದಿಂ ಬಂದ ದಂಡಿಗೆಯ ಧವಳಚ್ಛತ್ರದ ಚಾಮರಸೀಗುರಿಯ ದರ್ಪಣದ ಹಡಪದ ಶಂ[10]ಖದ[10] ಬಿಂಕದ ಬಾಹತ್ತರ ನಿಯೋಗಂ ಬೇಱೊಂದು ಮಾಹೇಶ್ವರ ತೇಜ[11][ಶ್ಯ][11]ಲಾಕೆ ಬೆಸಲಾದಂ[12]ತಿರೆ[12] ಹರಂ ತೊತ್ತುಗೊಂಡನೆಂಬ ಕೌತುಕದ ಪೆಸರು ವಸುಮತಿಯಂ ತೀವೆ ತನ್ನ ನೋಡಲ್ ನೆರೆದರಸುಮಕ್ಕ[13]ಳ[13] ಶರಣರ ಪಿರಿಯರ ಪರಸಮಯಿಗಳ [14]ಸಾವಂ ೨
ತರ[14] ಸಂದಣಿಯ ಗೊಂದಣಂ ಬೆರ[15]ಸು[15] ತಿರುನಾವಲೂರತ್ತಲಭಿಮುಖನಾಗಿ ಮನೋಜಹರ[16]ಮನೋಹರ[16]ನೆಂಬ ಅಂಬಿಕಾಪ್ರಿಯ[17]ಚಿತ್ತಪ್ರಿಯ[17]ನೆಂಬ [18]ತಂಬಿರಾಂತೋಳ[18]ನೆಂಬ ಕಡುಸಲುಗೆಯ ಬಿರುದಿನ ಬಹುವಿಧದ ಕಹಳಾರವಂ ದೆಸೆದೆಸೆಗೆ ಪರಿಯೆ ನಡೆತಪ್ಪಾಗಳ್-

ಈ ಕುಮಾ[19]ರಕಂ[19]ಗಾಕಸ್ಮಿಕಂ [20]ಶಿವಕರುಣಮಾ[20]ದುದಂ ತವೆ ಕೇಳ್ದು ಕೌತುಕಂಬಟ್ಟು ನರಸಿಂಗವೊಸೆಯರ್ ಮುದದಿಂದಿದಿರ್ವಂದಾಲಿಂಗಿಸ

---

[1] + ಯಣ್ಣಂ (ಕ). [2] ನಾಂ ತೊತ್ತಾಗಿಹೆನೆಂದು ನಿಶ್ಚೈಸಿ ನಂಬಿಯಣ್ಣಂಗೆ ಮೈಯಿಕ್ಕಿ (ಖ:ಗ). [3] ದೇವಾ ನಿಮ್ಮಡಿಗಳ ಬಿಡೆ (ಖ), ದೇವದೇವ ನಿಮ್ಮಡಿಗಳನಾಂ ಬಿಡೆಂ (ಗ), ದೇವದೇವ ನಿಮ್ಮಂ ಬಿಡೆಂ (ಚ). [4] ಭಾಳೆಂನ ಭಾಳೆಕ್ಷನೆನುತ ಪಿನಾಕಿ (ಕ), ಭಾಳೇಕ್ಷಣಂ (ಖ), ಬಾಳ್ಗೆನ್ನ ಭಾಳಾಕ್ಷ (ಗ), - - - ಯೆನತ ಪಿನಾಕಿ (ಚ), - - - ವೆನುತೆ ಪಿನಾಕಿ (ಜ). [5] ದ ಪೊನ್ನಂ ತುಂಬುರನ ವಶಕ್ಕೆ(?) ಮುದ್ರೆಯನೊಡಸಿ ಪೊನ್ನಂ (ಖ), . . . ವಶಕ್ಕಿತ್ತು ಮುದ್ರೆಯನೊಡಸಿ ಹೊನ್ನ (ಗ). [6] (ಚ) ದಲ್ಲಿಲ್ಲ. [7] + ಕವಿಗಮಕಿವಾದಿವಾಗ್ಮಿಗಳಿಗಿತ್ತು (ಚ). [8] (ಖಗ)ಗಳಲ್ಲಿಲ್ಲ. [9] + ಮುದ್ರೆಯನೊಡಸಿ(ಗ). [10] ಕಧ್ವನಿಯ (ಚ). [11] ಸ್ಸ (ಕಜ), ಸ (ಖ), ಶಾ (ಗ), ಶ (ಚ). [12] ತೆ (ಖಗ). [13] ಳು (ಕಗ). [14] (ಖ) ದಲ್ಲಿಲ್ಲ. [15] ಸಿ (ಚಜ). [16] (ಕಚ) ಗಳಲ್ಲಿಲ್ಲ ; ನ ಮನೋಹರ (ಖಗ). [17] ನ ಚಿತ್ತಪ್ರಿಯ (ಖ), ನ ಪ್ರಿಯಚಿಂತ (ಗ). [18] ತಂಬಿರಾಂದೊಳ (ಕಗ), ಕಂಬಿರಾಂದೊಳ (ಖ), ತಂಬಿರಾಂತೊಳ (ಚ), ತಂಬಿರತೊಳ (ಜ). [19] ರಂ (ಚಜ). [20] ಹರಂ ಕರುಣಿಸಿ (ಚ).

[1]ಲೀಯ[1]ದೆ ಮಯ್ಯಿಕ್ಕಿ ನಿಂದು ಹರುಷವಿಕಳನಾಗಿ [2]ಬಾಯ್ಗೆ ಬಂದುದಂ[2] ಪೊಗಳಿ ನೆಱೆ ಪುಳಕಿತನಾಗಿ ಶಿವನ ಶಿಶುವೆ ಶಿವನ ಕುಮಾರಕನೆ ಶಿವನ ಕಣ್ಣೆ [3]ಶಿವನ ಪುಣ್ಯವೆ ಶಿವನ ಸೊಬಗೆ[3] ಶಿವಶಿವಾ ಎಂದು ಕೊಂಡಾಡಿ [4]+ ಪುರಕ್ಕೊಡಗೊಂಡು ಬಂದರಮನೆಯಂ ಪೊಕ್ಕು [5]+ ಸಿಂಹಾಸನದೊಳು ಬಿಜಯಂಗೆಯ್ಸಿ ಶ್ರೀಪಾದಮಂ ತೊಳೆದು ಪಾದೋದಕಮಂ [6]+ ತಳೆದು [7]ಕಣ್ಗಳೊ[7]ಳೊತ್ತಿ ಬಾಪು ಭಾಗ್ಯವೆ ಎಂದು ಕೃತಾರ್ಥ[8]ಮನನಾ[8]ಗುತ್ತಿರಲ್- ಇತ್ತಲಿದೆಲ್ಲಮಂ ಕೇಳ್ದು ಜೆಡೆಯನಾಯನಾರುಂ ಯಿಸೈಜ್ಞಾನಿ ದೇವಿಯರುಂ [9]ಕಡು[9]ನೇಹವಡೆಗೊಂಡು ಸಂ[10]ತೋಷಂ[10] ಸರ್ವಾಂಗದೊಳ್ ತೀವಿ [11]ಬಿ[11]ಬ್ಬನೆ ಬಿರಿದಬ್ಬರಿ[12]ಸುತ್ತೆ[12]ಯ್ತಂದು ಸಿಂಹಪೀಠದೊಳಿರ್ದ ನಂಬಿಯಣ್ಣನಂ ಕಂಡೆತ್ತಿ ತೆಗೆದು ತಕ್ಕೈಸಿ ಹೆತ್ತ[13]ತಾಯ ಮೊಲೆ ತೊ[13]ರೆಯೆ [14]ಪುಳಕಿಸುವ[14] ಜೆಡೆಯನಾಯನಾರ ಮಯ್ ತೊರೆಯೆ ಸಲಹಿದ ನೃಪನ ಮನಂ ತೊರೆಯೆ ಹಿಂಗದೆ ನೋಳ್ಪವರ ಕಂಗಳ್ ತೊರೆಯೆ ಜಗ[15]ಮಂ ಪೊರೆಯಲಿರ್ದ ಪರಮಾರ್ಥದ ತಿರುಳ್[15] [16]ಪುಣ್ಯಾದಂ[16]ತಿರ್ದ ಸೌಂದರನಂ ನೋಡಿ[17]+ ಹಿಗ್ಗುತುಂ ಹೊಂಗುತುಂ ಹೊರೆಯೇಱುತುಂ [18]ತೂಗುತುಂ [19]ಬೀಗುತುಂ ಬಿರಿವುತುಂ ತೆರಳು[19]ತ್ತೆಲ್ಲರುಂ ಶೈವಸಂಪನ್ನರಾಗಿ ಪುಳಕದ ಪುಂಜವಾಗಿ ಅನುರಾಗದಾಗರವಾಗಿ[18] ಭಕ್ತಿಯ ಬೆಳೆಸಿರಿವಂತರಾಗಿ ನುಡಿಯಲಱಿಯದೆ ನೋಡುತ್ತಮಿರೆ

ನರಸಿಂಗಮೊನೆಯ[20]ರು[20] ಯಿಸೈಜ್ಞಾನಿ ದೇವಿಯರ ಮೊಗಮಂ ನೋಡಿ

---

[1] (ಖಗ) ಗಳಲ್ಲಿಲ್ಲ. [2] ಮನಬಂದನಿತು (ಚ). [3] (ಚ) ದಲ್ಲಿಲ್ಲ. [4] + ಕೌತುಕಂಬಟ್ಟು (ಕ); ಮುಂಡಾಡಿ (ಖಗಚ). [5] + ದಿವ್ಯ (ಖಗಚ). [6] + ಶಿರದೊಳ್ (ಗ). [7] ಕಣ್ಣೋಳ್ಕಪೋಳದೊ (ಖ), ಕಂಣೊಳೊತ್ತಿ ಕಪಾಳದೊ (ಗ), ಕಂಗಳೊಳೊತ್ತಿ ಕಪೋಳದೊ (ಚ). [8] ರಾ (ಚ). [9] ನಂಬಿಯಣ್ಣನಂ ಕಂಡು (ಖ); ಬಂದು ನಂಬಿಯಂಣನಂ ಕಂಡು (ಗ). [10] ತಸ<ಸಂ>(ಖಗ). [11] ಬೆ (ಖಗ). [12] ದಬ್ಬರಿಸುತಿರಲಿತ್ತಲೆ (ಚ). [13] ತಾಯ್ ಮೊಲೆದೊ (ಕ). [14] (ಖಗಚ) ಗಳಲ್ಲಿಲ್ಲ. [15] - - - ತಿರುಳಂ ತೀರ್ಥ (ಖ); (ಗ) ದಲ್ಲಿಲ್ಲ. [16] ಕರಣೆಯಂ (ಜ). [17] + ನೋಡಿ (ಕಚ). [18] (ಗ) ದಲ್ಲಿಲ್ಲ. [19] ಬೀಗುತಂ ಬಿರಿಉತುರುಳು (ಖ), ಬಿರಿವುತ್ತಂ ಅರಳು (ಚ). [20] ರಾ (ಖಗ).

ಎಲೆ ತಾಯೆ ಸಂಬಿಯಣ್ಣನ ಪೆತ್ತ [1]ನಿನ್ನು[1]ದರವೆ ಉದರಂ [2]ನಿನ್ನ ಮೊಲೆಯೆ ಮೊಲೆಂಸೆಂದಾ[2] ಪುಣ್ಯೋದರಕ್ಕೆ [3]+ ಪ[4]ಟ್ಟಂಗ[4]ಟ್ಟೆ ಎಲೆ ದೇವ ನಿಮ್ಮ [5]ನಿನಿತು ದಿನಂ[5] ಮಗನೆಂದು ಬಗೆದ ತಪ್ಪನೊಪ್ಪಂ ಮಾ[6]ಡುವುದೆಂ[6]ದು ಬೇಡಿಕೊಳ್ವರ ಸನಂ ತಾಯ್ತುಂದೆಗಳುಮಂ [7]ನಿರೀಕ್ಷಿಸುತ್ತೆ- ಅಂಜದಿರಿ[7] ಎನ್ನ ಪೆತ್ತ ನಿಮಗಂ [8]ಸಲಹಿದ ನೃಪಗಂ[8] ಸಂಸಾರಭಯವಿಲ್ಲ ಶಿವನ ಕರುಣಂ ನೆಲೆಗೊಂಬುದೆಂದು ಕರುಣಿಸಿ ಬೆಸಸಿ ಮತ್ತಮಿಲ್ಲಿಂದ[9]ವಿನ್ನೆ[9]ನಗೆ ಪಾರ್ವತಿಯೆ ತಾಯಿ ವಿರೂಪಾಕ್ಷನೆ ತಂದೆ [10]+ [11]ಈ ಲೋಕಕ್ಕೆ[11] ಪರವಶನಲ್ಲಂ ಹರವಶಂ ಶಿವನೆಲ್ಲಿರಿಸಿದ ನಲ್ಲಿರವೇಳ್ಕುಂ ನಿಮಗೆ ಶಿವನುಂ ಪಂಚಾಕ್ಷರಿಯುಂ [12]ಭಕ್ತರುಂ[12] ಪರಮ ಬಂಧುಗಳು ಪಿರಿ[13]ದುಮಾ[13]ಪ್ತರೆಂದುಳ್ಳುದನುಪದೇಶಂ ಮಾಡಿ ಭದ್ರಾಸನ ದಿಂದೆದ್ದು ನರಸಿಂಗವೊಸೆಯರ್ ಕೈಗುಡೆ ತಾಯ್ತುಂದೆಗಳ್ ಪರಸೆ [14]ಪುರಜನಂ ಪೊಡಮಡೆ[14] [15]ಶರಣರ್ ಜಯ ಜೀಯೆನೆ[15] ಸುಖಾಸನಕ್ಕೆ ಬಿಜಯಂಗೆಯ್ದು ಇಕ್ಕುವ ಸೀಗುರಿಯ ಬೀಸುವ ಚಾಮರದ ಪೊಯ್ವ ತಂಬಟದ ಸೂಳೈಪ ನಿಸ್ಸಾಳದ [16]ಪೂರೈಪ ಶಂಖದ[16] ಬಿ[17][ರು][17]ದೆತ್ತಿ ಕರೆವ ಕಹಳೆಗಳ ಸರ್ವಸಂಭ್ರಮದ ನಡುವೆ ಸಕಲಜ[18]ನದಾ[18]ನಂದರಸಂ ಮುಡುಗಟ್ಟೆ ಚೋಳದೇಶಂ ಗುಡಿಗಟ್ಟೆ ಭಕ್ತರ ಭಾಳಂ ಪ[19]ಟ್ಟಂಗ[19]ಟ್ಟೆ ಭಕ್ತಿರಸಂ ಸೇತುಗಟ್ಟೆ ಸ[20]ತ್ಯದ[20] ನುಡಿ ಕೆಚ್ಚುಗಟ್ಟೆ ಪುಣ್ಯದ [21]ಫಲಂ[21] ಪೆರ್ಗೊನೆಗಟ್ಟೆ ಪರಸಮ[22]ಯಂ[22] ಸರಕುಗಟ್ಟೆ

---

[1] ನಿಂಮು (ಕ). [2] ನಿಂಮ - - - (ಕ), ನಿನ್ನ ಮೊಲೆವಾಲೇ ಮೊಲೆವಾಲೆಂದು (ಖ), ನಿಂನ ಮೊಲೆಹಾಲೆಂದು (ಗ), ನಿಂಮ ಮೊಲೆವಾಲೆ ಪಾಲೆಂದಾ (ಚ). [3] + ವಿಭೂತಿಯ<ಯಂ> (ಖಗ). [4] ಟ್ಟವುಂ ಕ (ಚ), ಟ್ಟಗ (ಜ). [5] (ಗ) ದಲ್ಲಿಲ್ಲ. [6] ಡಲೆಂ (ಜ). [7] ಕೃಪೆಯಿಂದೀಕ್ಷಿಸುತ್ತಂ ಬನ್ನಿರೆ(ಖ.ಗ.ಚ). [8] (ಗ) ದಲ್ಲಿಲ್ಲ. [9] ಮುಂದೆ (ಖ). [10] + ಶಿವಭಕ್ತರೆ ಬಂಧುಗಳು ಶಿವಾಲಯವೆ ಅರಮನೆ ಶಿವಪ್ರಸಾದವೆ ಸಕಲಭೋಗಂ ಶಿವಪುರವೆ ಪಟ್ಟಣಂ ಶಿವಲೋಕವೆ ಲೋಕಂ (ಖ:ಗ:ಚ). [11] ಯಿನ್ನಾಂ (ಖಗಚ). [12] ಭಕ್ತರೆ (ಕಜ); ಶಿವಭಕ್ತರು <ರುಂ>(ಖಚ), ಶಿವಭಕ್ತರುಗಳು (ಗ). [13] ದಾ (ಖಗ). [14] (ಗ) ದಲ್ಲಿಲ್ಲ. [15] - - - ಜಯಜಿಯ್ಯೆನೆ (ಕ), ಶರಣರುಂ<ರು> ಜಯ ಎ<ಯೆ>ನೆ (ಖಚ), ಜತೆ(?)ಯನಾರು ಜಯಜಯಯೆನೆ (ಗ), - - - ಜಯಜಿಯ್ಯಯೆನೆ (ಜ). [16] (ಗ) ದಲ್ಲಿಲ್ಲ. [17] ರಿ (ಸ). [18] ನಾ (ಖಗಚ). [19] ಟ್ಟಗ (ಕಚಜ), ಟ್ಟವುಂ ಕ (ಗ). [20] ದ್ಭಕ್ತರ (ಚ). [21] ಪುಳಕಂ (ಗ). [22] ಯಿಗಳ್ (ಕ).

ಪುರಮಂ ಪೊಱಮಟ್ಟು ಕಿಱಿದಂತರಂ ನಡೆತಂದು ತಾಯ್ತಂದೆ[1]ಯರ್ಗಂ[3] ಬೀಳ್ಕೊಟ್ಟು [2]+ಪರಮಾನುರಾಗದಿಂ ಬರೆವರೆ

ಮುಂದೊರ್ವ ಶಿವಭಕ್ತಂ ಮುಂಗುಡಿಯೊಳು ಗುಡಿಗಟ್ಟಿ ಕುಣಿ[3]ವೃ[3]ತ್ತಿರಲವರಂ ಸಂಬಿಯಣ್ಣಂ [4]ಬೆಸಗೊ[4]ಳಲವರ್ ಕೇಳದಂತೆ ಮತ್ತೆ ಮತ್ತೆ [5]ಸುತ್ತಿ ಕುಣಿವೃತ್ತಿರಲು[5] ಹ[6]ತ್ತೆ[6] ಸಾರ್ದು- ಎಲೆಯಯ್ಯಾ ನೀವಾರ್ ನಿಮ್ಮ ಪೆಸ[7]ರೇನೆ[7]ನೆ [8]ಆ[8] ನಂಬಿಯಣ್ಣನ ತೊತ್ತಿನ [9]ತೊತ್ತು[9] [10]+ ಬಂಟರ ಬಂಟನೆನ್ನ ಪೆಸರು ಪೆರುಮಳ[11]ಲೆ[11]ಯ ಕುಱುಂಬರೆಂದು ಇಂದು ಮೊದಲಾಗಿ ನಿಮ್ಮಡಿಗಳ ಮುಂದೆ ಗುಡಿಗಟ್ಟಿ ಬರ್ಪುದಿದೆ ಸೇಮವೆಂದು ನಲಿನಲಿದಾಡೆ ಕೇಳ್ದು ಸಂತಸಮನೆಯ್ದಿ ಬರುತ್ತಿರೆ

ಮುಂದೆ ಗ್ರಾಮವೆಂಬ [12]ಶಿವ[12]ಪುರದ [13]ಚೊಕ್ಕಣಂ ಕೊಡುತ್ತ ನಾಯನಾರ್- ಎಮ್ಮ[13] ಮಗಂ ಸಂಬಿ ಬಂದ[14]ಪನಾತಸಂ ನೀವೆಲ್ಲಿ[14]ದಿರ್ಗೊಂಬುದೆಂದಲ್ಲಿಯ ಮಾಹೇಶ್ವರರೆಲ್ಲರ್ಗೆ ಬೆಸಸೆ ಮಂಗಳಮೃದಂಗ ತೂರ್ಯತ್ರಯ ಪ್ರವೀಣ ನಾನಾವಿಳಾಸಿನೀನಿಕರದಿಂದಿದಿರ್ಗೊಳಲು ಪುರಮಂ ಪೊಕ್ಕು [15]+ಶಿವಾಲಯಕ್ಕೆ ಬಂದು [16]ದೇವ[16]ದೇವ [17]+ದೇವಶಿಖಾಮಣಿ ದೇವಜನಜನಕ [18]ದೇವ[18]ಸಕಲಜಗದಾಧಾರ ದೇವ ಕರುಣಿಸೆಂದಲ್ಲಿ ಕ[19]ಕ್ಷಾ[19]ಧಾರ[20]ಮಂ ವಿಭೂತಿಸಹಿತಂ[20] ಪಡೆದು ಸಕಲಸಾಮರ್ಥ್ಯಮಂ ಕಂಕುಳೊಳಿಱುಂಕುವಂತಳ

---

[1] ಗಳಂ (ಖಗ). [2]+ನರಸಿಂಗಮೊನೆಯರ<ರಂ>ನಾದರಿಸಿ ಕಳುಪಿ<ಹಿ> (ಖಗ). [3] ಯು (ಗ), ಯಿ (ಚ). [4] ಕೇ (ಖ). [5] ಸುತ್ತಿಮುತ್ತಿ ಕುಣಿವು<ಯು>ತ್ತಿರೆ (ಖಗ), ತು×ಸುತ್ತಿರೆ (ಚ), ಕುಣಿವುತ್ತಿರಲು (ಜ). [6] ತ್ತಿರೆ (ಚ). [7] ರಾರೆ (ಕ), ರಾಉ<ವು>ದೆ (ಖಗ). [8] ನಾ (ಕಗ), ನಾಂ (ಖ). [9] ತೊತ್ತಿನ ತೊಳ್ತು (ಗ). [10]+ಆ ನಂಬಿಯಂಣನ (ಚ). [11] ಲಿ (ಖಜ). [12] (ಜ) ದಲ್ಲಿಲ್ಲ. [13] ಚೊಕ್ಕಂಣಂ ಗುಡುಗುತ್ತಾನಾಯಿನಾರೆಂಮ (ಕ), ಚೊಕ್ಕನ್ನೈ<ನಾಯಿ>ನಾರೆಮ್ಮ (ಖಗ), ಮುಕ್ಕಂಣಂ ಕೊಡುತನಾಯಿನಾರುಂ ಯೆಂಮ (ಚ), - - - ಗುಡುತ್ತ ನಾಯ್ನಾರೆಂಮ (ಜ). [14] ಗುಡಿಗಟ್ಯಾತನನಿ (ಖಗ). [15]+ಚೊಕ್ಕನ<ನಾ>ಯಿನಾರ (ಖಗ). [16] ದೇವರ (ಕಖಗ). [17]+ದೇವ ದೇವೇಶ (ಗ). [18] (ಖಗ) ಗಳಲ್ಲಿಲ್ಲ. [19] ಕ್ಷದಾ (ಜ). [20] ದ ವಿಭೂತಿಯಂ (ಖ).

ವಡಿಸಿ ನಿತ್ಯಪಡಿ[1]ವೊ[1]ನ್ನಂ ನಿರ್ವಿ[2]ಚಾ[2]ರದಿಂ ಕೊಂಡು ತ್ಯಾಗಭೋ[3]ಗಂ[3]ಗಳಂ ಮಾಡುತ್ತೀ ತೆಱದೊಳು ಪಲವು ಶಿವಪುರಂಗಳಂ ಪೊಕ್ಕು ಸಲುಗೆಯಿಂ ಬೇಡುತುಂ ಬಲ್ಪಿನಿಂ ಕಾಡುತುಂ ನಲವಿಂ[4]ದೆ ಪಾ[4]ಡುತುಂ ಪಡಿವೊಂಗಳಂ ಕೊಳುತುಂ ಶಿವನ ಸೆಜ್ಜೆಯಂತಿರ್ದ ತಿರು[5]ವಾರೂ[5]ರ್ಗೆ ನಡೆತಪ್ಪಾಗಳು ||

## ಅಷ್ಟಮ ಸ್ಥಲಂ

---

[1] ಹೊ (ಖಗಜ). [2] ಕಾ (ಕ). [3] ಗಾದಿ (ಖಗಚ). [4] ದಾ (ಖ), ದಪಾ (ಗ), ಕಾ (ಚ). [5] ನಾವಲೂ (ಕ).

# ೯ನೆಯ ಸ್ಥಲ

ಅದನೇನೆಂದಪೆನೀ ಜಗತ್ತ್ರಯದ ಪುಣ್ಯಂ ರೂಪುಗೊಂಡಿತ್ತೊ ಮೇ-
ಣುದಯಾದ್ರೀಂದ್ರದೊಳೊಪ್ಪುವರ್ಕಕುಳ ಜನ್ಮಸ್ಥಾನವೋ ಸೋಮಸಂ-|
ಪದಮಂ ಪೆರ್ಚಿಪ ಸೋಮಲೋಕತಿಲಕಾಲಂಕಾರವೋ ಸತ್ಯಲೋ-
ಕದ ಶೈವಾಗಮತೇಜ[1]ದಿಕ್ಕೆ[1]ಯೊ ಎನಲ್ ಕಣ್ಗೊಪ್ಪಿ ತೋಱಲ್ ಪುರಂ ||

ಶ್ರೀಶಿವನ ಸೆಜ್ಜೆ[2]ಯೆನಿಸಿರ್ಪ[2] [3]ತಿರುವಾರೂರ[3]
ಭಾಸುರದ ಪೆರ್ಮೆಯ[4]ದನೇ[4]ನೆಂಬೆ[5]ನೆಲೆ ಧೀರ[5] |
[6][ವ]ಲ್ಮೀಕ[6]ಪುರವೆಂಬುದಾದಿಯ ಪೆಸರ್ ತನಗೆ
ಕಲ್ಮಷದ ಯುಗಧರ್ಮವೆಯ್ದೆ ಪೊರ್ದದು ತನಗೆ |
ಬಳಿಕಂ ಜಲಪ್ರಳಯವಾದಲ್ಲಿ ತಾಂ ಮೇಲೆ
ತೊಳತೊಳ[7]ಗಿ ನೆಗೆದು[7] [8]ತೇಂಕಾಡುತಿರ್ದುದು[8] ಮೇಲೆ |
ದೇವರ್ಕಳೆಲ್ಲ[9]ರುಂ ಕಂಡಿದಾರೂರೆ[9]ನಲು
ದೇವ ಪೆಸರಾದುದಾರೂರೆಂಬುದಿದಕೆನಲು |
ಇದನೆಂತು [10]ಪೊಗಳ್ದ[10]ಪೆಂ ದೇವ ಪೆರ್ಮೆಯ ಪುರಂ
ಇದನೆಂತು [11]ಬಣ್ಣಿ[11]ಪೆಂ ಶಂಭು ನೆಲಸಿದ ಪುರಂ |
ಎಂದು ತುಂಬುರನಲ್ಲಿ ಬಿನ್ನೈಸುತುಂ ಬರಲು
ಮುಂದೆ ಸಳಸಳಿಸುತ್ತೆ ಶಾ[12]ಲಿವನವೊ[12]ಪ್ಪಿರಲು |
ಅವಧರಿಸು ದೇವ ಕಳಮಾ[13]ದಿ[13]ಗಳ ಕೆಯ್ಗಳಿವೆ
ಶಿವಭಕ್ತನಂತೆ [14]ತೆನೆಬಾಗಿ ತೂಗಾಡುತಿವೆ[14] |

---

1 ದೇಳ್ಗೆ (ಕ), ದಿಳ್ಕೆ (ಜ). 2 ಯಂತಿರ್ದ (ಚ), ಯೆನಿಸಿರ್ದ (ಜ). 3 ತಿರುವಾವೂರ (ಖ), ತಿರಿವಾರೂರ (ಗ), ತಿರುವಾಲೂರ (ಜ). 4 ನೆದೇ (ಕ), ನದೇ (ಚ). 5 ನಾವೂರ (ಚ). 6 ವಾಲ್ಮೀಕಿ (ಕ), ವಾಲ್ಮೀಕ (ಖಗಚಜ). 7 ಗುತಲ್ಲಿ (ಜ). 8 ತೇಲಾಡುತ್ತಮಿರೆ (ಖ), ತೇಂಕಾಡುತ್ತವಿ<ಮಿ>ರೆ (ಗಚ). 9 ಕಂಡಾರೂರಿದೆಂದೆ (ಜ). 10 ಬಂಣಿ (ಖಗಚ). 11 ಪೊಗಳ್ದ (ಖಗಚ). 12 ಸನವದೊ (ಗ). 13 ಳಿ (ಚ). 14 ತೆನೆಬೀಗಿ ಬಾಗುತ್ತಲಿವೆ (ಖ : ಗ : ಚ) ; ತಲೆವಾಗಿ - - - (ಜ).

ಶಿವನ ಪೂಜಾರಸಮನುಂಡ ಭಕ್ತನ ತೆಱ[1]ದೆ[1]
ಶಿವಗೋಷ್ಠಿರಸದಿಂದೆ [2]ಬ[2]ಳೆದ ಶರಣನ ತೆಱ[3]ದೆ[3] |
ತೆಸೆವಾಲನುಂಡು [4]ಬ[4]ಳೆದವು ಗಿಳಿಗ[5]ಳಿಲೆ[5] ದೇವ
ಅನುರಾಗವಾದಂತೆ ಮುಖರಾಗದಿಂ ದೇವ |
ಪಱ[6]ದು[6]ಗುವ ಕರ್ಬುಗಳ ತನಿರಸದ ಪೊನಲಿಂದೆ
ನೆಱೆಯೆ ಬೆಳೆದುವು ಪುರದ ಕಳವಮಾ[7]ದಿ[7] ನಯದಿಂದೆ |
ಕದಳೀಫಳದ ರಸದ [8]ಪರಿಕಾಲ್ಗಳಿಂ[8] ದೇವ
[9]ಮುದದಿಂದೆ ಕರ್ಬುದೋಂಟಂ [10]ಬೆಳೆದವೆ[10]ಲೆ ದೇವ |[9]
ನಿಮಗಂಜಿ ಯಿಲ್ಲಿ ಬಿಲ್ಲಂ ಬಿಸುಟನಂಗಜಂ
[11]ನಿಮಗಂಜಿ ಕುಸುಮ[12]ಶರಮಂ[12] ಬಿಸುಟನಂಗಜಂ |[11]
ಶಿವನಲ್ಲಿ ತಿರುನಾಳ್ಗೆ ಬರೆ ಕಂಡು ತರುಕುಳಂ
ಶಿವನ ರೂಪಂ ಬಯಸಿ ಬೆಳೆದವು ನಿರಾಕುಳಂ |
ಹರನ ಜೆಡೆಯಂ ಕಂಡು [13]ಬಿಳಲ್ವರಿದವಿಂತಿಲ್ಲಿ[13]
ಹರನ ಬಾಯ್ದೆಱೆಗಂಡು ಬಿರಿದ ದಾಡಿಮವಿಲ್ಲಿ |
ಪಾರ್ವತಿಯ ಮುಡಿಗಂಡು [14]ಬ[14]ಳೆದ ಕೇಕಿಗಳಿಲ್ಲಿ
[15]ಶರ್ವನ ಸು[15]ಬಾಹುಗಂಡೊಗೆದ ಶಾಖೆಗಳಿಲ್ಲಿ |
ಉರಗನಾಭರಣಮಂ ಕಂಡಾದ ಲತೆ[16]ಯಿ[16]ಲ್ಲಿ [17] +
ಹರಹಸ್ತರಾಗದಿಂ ಬೆಳೆದಶೋಕೆಗಳಿಲ್ಲಿ |

---

1 ದಿ (ಸ). 2 ಬೆ (ಸ). 3 ದಿ (ಕಖಚ). 4 ಬೆ (ಕಖಗಚ). 5 ಳಿವೆ (ಚಜ). 6 ದೊ (ಕಖಗಚ). 7 ಳಿ (ಚ). 8 ಪರಿವಕಾಳ್ಗಿಂ (ಕ), ಪರಿವ ಕಾಲ್ವೆಗಳಿಂ (ಗ), ಕಾಲುವೆಗಳಿವೆ (ಚ). 9 ಈ ಪಂಕ್ತಿ (ಚ) ದಲ್ಲಿಲ್ಲ. 10 ಗಳಿವೆ ಎ<ಯ>(ಖಗ). 11 ಈ ಪಂಕ್ತಿ (ಖ) ದಲ್ಲಿಲ್ಲ. 12 ಸರಳಂ (ಕ), ಸರಮಂ (ಚಜ). 13 ಬಿಳಿಲ್ ಪರಿದವಿಉಯಿಲ್ಲಿ (ಖ), ಬಳಲ್ವದವನಲ್ಲಿ (ಗ), ಬಿಳಲುವರಿದವಿಲ್ಲಿ (ಚ), ಬಿಳಿಲ್ವರಿ - - - (ಜ). 14 ಬೆ (ಸ). 15 ಸರ್ವನರು (ಕ), ಸರ್ವನನು (ಖಗ), ಸರ್ವನಂ (ಚ). 16 ಯು (ಕಚ). 17 + ೩೧, ೩೨ನೆಯ ಪಂಕ್ತಿಗಳ ನಡುವೆ: 'ಹರನ ಚರಣಂಗಂಡು ನೆಗದ ಸರಸಿಜವಿ<ವ>ಲ್ಲಿ' (ಕಜ). (ಮುಂದೆ ೩೪ನೆಯ ಪಂಕ್ತಿಯನ್ನು ನೋಡಿ.)

[1]ಶಿವ[1]ನೂರುದಂಡದಿಂದಾದ ಬಾಳೆಗಳಿಲ್ಲಿ
[1]ಶಿವ[1]ನ ಕರನಖದಿಂದ[2]ವಾ[2]ದ ಕೇತಕಿಯಿಲ್ಲಿ |
[3]ಹರನ ಚರ[4]ಣಂಗಂ[4]ಡು [5]ನೆಗೆ[5]ದ ಸರಸಿಜವಿಲ್ಲಿ
ಹರಕಾಂತಿಯಿಂದಾದ ವಿಮಳಸರಸಿ[6]ಗಳಿ[6]ಲ್ಲಿ |[3]
[7]ದೇವಿಯರ ನಡೆಯಿಂದಲಾದ ಹಂಸೆಗಳಿಲ್ಲಿ
ದೇವಿಯರ ನೋಟವೊಂದಿದ ಚಕೋರಿಗಳಿಲ್ಲಿ |[7]
[8] + ದರಹಾಸದಿಂ ಬೆಳೆದ ಕುಸುಮ[9]ಸಂಕುಳಮಿ[9]ಲ್ಲಿ
[10]ವರಕುಚವುನ[10]ಉದೊಗೆದ ಚಕ್ರವಾ[11]ಕಮುಮಿ[11]ಲ್ಲಿ |
ಶಿವನ ಕಹಳೆಯ ದನಿಗೆ [12]ಬಳೆದ[12] ಕೋ[13]ಕಿಳನಿ[13]ಲ್ಲಿ
ಶಿವಗೀತದೊಳು ಬೆರಸಿ [14]ಬ[14]ಳೆದ ಮಧುಕರವಿಲ್ಲಿ |
ಇಂತು ಕಿಕ್ಕಿಱಿಗಿಱಿದ ವನವನೀಕ್ಷಿಸು ದೇವ
ಕಂತು [15]ಕಳವಿಂದಿರ್ಪ ಜ[15]ನವನೀಕ್ಷಿಸೂದೇವ |
ಶಿವಭಕ್ತ[16]ರಂ[16] ಕೋಪವು[17]ಚ್ಚ[17]ಳಿಸದಂದದಿಂ
ರವಿಕಿರಣ[18]ವಿಲ್ಲಿ ಉಚ್ಚಳಿಸವಾವಂ[18]ದದಿಂ |
ಉದಯಾಸ್ತಮಯವಿಲ್ಲಿ ಕಾಣಬಾರದು ದೇವ
ಪದ[19]ಪಿಂದವ[19]ಱುವಡಿನ್ನೊಂ[20]ದುಂಟೆಲೇ[20] ದೇವ |

---

1 ಹರ (ಜ). 2 ಲಾ (ಕಖಗಜ). 3 ಈ ಎರಡು ಪಂಕ್ತಿಗಳು (ಕ) ದಲ್ಲಿ ಹಿಂದುಮುಂದಾಗಿವೆ ; (ಜ) ದಲ್ಲಿ, 'ಹರನ - - - ಸರಸಿಜವಿಲ್ಲಿ' ಎಂಬ ಪಂಕ್ತಿ ಇಲ್ಲ. (ಹಿಂದಿನ ಪುಟದ 17 ನೆಯ ಅಡಿಟಿಪ್ಪಣಿಯನ್ನು ನೋಡಿ.) 4 ಣವ ಕಂ (ಕ). 5 ಬೆಳ (ಖಗ), ನೆರ (ಚ). 6 ಜವಿ (ಚ). 7 ಈ ಪಂಕ್ತಿಗಳು (ಗ) ದಲ್ಲಿಲ್ಲ. 8 + ಗಿರಿಜೆ (ಖಗ). 9 ಗಳಿ (ಖಗ). 10 ಗಿರಿಜೆಕುಚವ (ಖಗ). 11 ಕಗಳಿ (ಕಖಗ), ಕಂಮಿ (ಚ). 12 ಬೆಳದ (ಕಚಜ), ಉ<ಯು>ಲಿವ (ಖಗ). 13 ಗಿಲಿಯಿ (ಖ), ಕಿಳವಿ (ಗಚ) 14 ಬೆ (ಕಖಚಜ). 15 ಕಳೆಯಿಂದಿರ್ಪ ವ (ಖಗ), ಕಳೆಯಂತಿರ್ದ ಬ (ಚ). 16 ರಿಂ (ಕ), ನಂ (ಖಗ). 17 ಛ (ಖ), ತ್ಸ (ಚ). 18 - - - ಸವಾನಂ (ಕಜ), ಉಛ್ಛ<ವುಚ್ಚ>ಳಿಸವಿಲ್ಲಯಾವಂ (ಖಗ), ವುತ್ಸಳಿಸದಿಲ್ಲಿಯಾನಂ (ಚ). 19 ಪಿನಿಂದ (ಖ), ಪಿಂದಲ (ಗಚ). 20 ದುಂಟುಯೆಲಿ (ಕಚ), ದುವುಂಟೆಲಿ (ಗ).

ಮೊದಲ ಶಂಖಧ್ವನಿಗೆ ಕಂಜವರಳ್ವವು ದೇವ
[1]ಮೊದಲುಳಿಯಲಾ[1] ಧ್ವನಿಗೆ [2]ಸೆಯ್ದಿಲ[2]ರಳ್ವವು ದೇವ |
ಇಂತಱುದುಕೊಳ್ವುದುದಯಾಸ್ತಮಾನವನಿಲ್ಲಿ
[3]ಇಂ[4]ತೆಂ[4]ದು [5]ಬಿನ್ನೈಸಿ[5] ತೋಱುತ್ತೆ ಬರಲಲ್ಲಿ |[3]
ನಾಗರ್ಕಳೀಗಳರ್ಚಿಸಿ ಹೋದರೆಲೆ ದೇವ
ನಾಗಲೋಕದ ಮಲ್ಲಿಕಾಕುಸುಮ[6]ವಿವೆ[6] ದೇವ |
ಗಂಧರ್ವರೀಗಳರ್ಚಿಸಿ ಹೋದರೆಲೆ ದೇವ
ಗಂಧರ್ವಲೋಕದ ಸರೋಜಂಗಳಿವೆ ದೇವ |
ದೇವರ್ಕಳೀಗಳರ್ಚಿಸಿ ಹೋದರೆಲೆ ದೇವ
ದೇವಲೋಕದ ಪಾರಿಜಾತದರಳಿವೆ ದೇವ |
ಎಂದು ತುಂಬುರಸೊಸೆದು ತೋಱುತ್ತೆ ಬರಲಲ್ಲಿ
ಮುಂದೆ ತಿರುವಾರ್ಡೂರ ಬಾಗಿಲ್ಗೆ [7]ಬರಲ[7]ಲ್ಲಿ |
ಇಳಿದು ದಂಡಿಗೆಯಿಂದೆ ಸೈಗೆಡೆದು ಪೊಡಮಟ್ಟು
ಪುಳಕಿಸುತೆ ಪುರಕೆ ಕಾಣ್ಕೆಯನೊಪ್ಪದಿಂ ಕೊಟ್ಟು |
ತುಂಬುರನ ಕೈವಿಡಿದು ಬಾಗಿಲೊಳಗಂ ಪುಗಲು
ಇಂಬಿನಿಂ ಹೆಚ್ಚುತ್ತೆ ಹಿಗ್ಗುತ್ತೆ ಬ[8]ರವ[8]ರಲು |
ಇತ್ತಲಭವಂ ಭಕ್ತಜನ[9]ವೆಲ್ಲರಂ[9] ಕರೆದು
ಚಿತ್ತದೊಳು ಹೆಚ್ಚುತ್ತೆ ನೀವೆಲ್ಲರುಂ ನೆರೆದು |
ಇದಿರ್ಗೊಂಬುದೆಮ್ಮ ಪುತ್ರಂ ಬರುತ್ತಿರ್ದಪಂ
ಸದಮಳಂ ನಂಬಿಯಣ್ಣಂ ಬರುತ್ತಿರ್ದಪಂ |
[10]ಎನ್ನ ಗತಿಯೆನ್ನ ಕಣ್ಣೆನ್ನ ಪುಣ್ಯಾಸ್ಪದಂ
[11]ಎನ್ನ ಮತಿಯೆನ್ನ ಸುಖ[ವೆ]ನ್ನ ಸಿಧಿ[11] ಸಂಪದಂ |[10]

---

[1] ಮುದದೆರಡನೆಯ (ಖ:ಗ). [2] ಕುಮುದವ (ಖ). [3] ಈ ಪಂಕ್ತಿ (ಖ) ದಲ್ಲಿ ಪುನರುಕ್ತವಾಗಿದೆ. [4] ತರಿ (ಕ). [5] ತುಂಬುರಂ (ಜ). [6] ವೆಲೆ (ಖ), ವಿದೆ (ಜ). [7] ಬಂದ (ಖಗಚ). [8] ರುತಿ (ಖಗ), ರಬ (ಜ). [9] ವೆಲ್ಲವಂ (ಕ), ರೆಲ್ಲರಂ (ಖಗ). [10] ಈ-ಎರಡು ಪಂಕ್ತಿಗಳು (ಖಗಚ) ಗಳಲ್ಲಿ ಹಿಂದುಮುಂದಾಗಿವೆ. [11] - - - ಸುಖಕರವೆನ್ನ (ಕ), ಎನ್ನೊಲವು ಎನ್ನ ನಲಿವೆನ್ನ ಸುಖ (ಖಗಚ), - - - ಸುಖ ಯೆನ್ನ ಸಿಧಿ (ಜ)

ಒರುತ್ತೈದನಿದಿರ್ಗೊಳ್ಳಿರೇ ಎನ್ನ ಕಂದನಂ
ಹರವರಿಯ ಘನಮನದ ಸಕಲಸುಖವೃಂದನಂ |
ಎನಲಲ್ಲಿ ಕೋಟಾನುಕೋಟಿ ಭಕ್ತರ್ ನೆರೆದು
ತನತನಗೆ ಮೆಱೆವ ತೂರ್ಯತ್ರಯಮುಮಂ ಕರೆದು |
ಹರನ [1]ಚೆಂಗಣಿ[1]ಗಿಲೆಯ [2]ತೋ[2]ಳ್ಮಾಲೆಯಂ ತರಿಸಿ
ಹರುಷದಿಂ[3]ದಂ[3] ಹೊನ್ನ ಹರಿಯಾಣದೊಳ್[4]ಗಿ[4]ರಿಸಿ |
ಕಹಳೆ ಮರ್ದಳೆ ಶಂಖ ಪಟಹನಾದಂಗಳೊಳು
ಬಹುವಿಧದ ಮಂಡನ ಸ್ತ್ರೀಸಮೂಹಂಗಳೊಳು |
ನಡೆತಂದು ನಂಬಿಯಣ್ಣನನಕ್ಕಱಿಂ ಕಂಡು
ಮೃಡನ [2]ತೋ[2]ಳ್ಮಾಲೆಯಂ ಕೊಟ್ಟು ಹರುಷಂಗೊಂಡು |
ಶಿವನ ಭಕ್ತಿಯನೊಪ್ಪದಿಂದಿದಿರ್ಗೊಳುವಂತೆ
[5]ಭವನ ನೇಹವ[6]ನೊಪ್ಪದಿಂ[6]ದಿದಿರ್ಗೊಳುವಂತೆ |[5]
ಇದಿರ್ಗೊಂಡು ಕೊಂಡು[7]ಬರುತಿರೆ[7] ನಂಬಿಯಣ್ಣನಂ
ಉದಯಿಸುವ ಬಾಲರವಿಯಂತಿರ್ದ [8]ಚಿಣ್ಣ[8]ನಂ |
[9]ಶಶಿ ಶಿವನನೋಲಗಿಪ[9] ಸೋಮವೀಥಿಯ ನಡುವೆ
[10]ಎ[10]ಸೆದು ರವಿಯೋಲೈಪ ಸೂರ್ಯವೀಥಿಯ ನಡುವೆ |
ಕಿನ್ನರರು ಬರ್ಪ ಕಿನ್ನರವೀಥಿಗಳ ನಡುವೆ
ಪನ್ನಗರು ಬರ್ಪ ಪನ್ನಗವೀಥಿಗಳ ನಡುವೆ |
ದೇವರ್ಕಳೆಯ್ತರ್ಪ ದೇವವೀಥಿಯ ನಡುವೆ
ಭಾವಕದೊ[11]ಳಿಂ[11]ತಪ್ಪ ಪಲವು ವೀಥಿಯ ನಡುವೆ |

---

[1] ಚೆಂಗಣ (ಖ), ಕೆಂಗಣಿ (ಚ). [2] ಕೊರ (ಜ). [3] (ಜ) ದಲ್ಲಿಲ್ಲ. [4] ದೊರಗಿ (ಕ), ಗೊಲ್ದಿ (ಜ). [5] ಈ ಪಂಕ್ತಿ (ಚ) ದಲ್ಲಿಲ್ಲ. [6] ನಕ್ಕರಿಂ (ಕ), ಮೋಹದಿಂ (ಖ). [7] ಬಂದರು (ಖಗ). [8] ಚಿನ್ನ (ಖಚ). [9] ಸಶಿ - - - (ಕ), ಸಸಿವೊಲಿದುವೋಲೈಪ (ಖ), ಶಶಿಯೊಲಿದುವೋಲಯಿಪ (ಗ), ಶಿವನನೋಲಗಿಪ (ಚ), ಶಶಿವೋಲಯ್ಸುತಿರ್ಪ (ಜ). [10] ವೊ (ಖಗಚ). [11] ಳ್ಳೈ (ಕಚ).

